# ಮಹಿಳಾ ಅಧ್ಯಾಪಿಕೆಯರು ಮತ್ತು ಅಭಿವೃದ್ಧಿ - ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಾಲೇಜು ಶಿಕ್ಷಣದ ಒಂದು ಅಧ್ಯಯನ



ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ
ಸಂಪ್ರಬಂಧ

ಸಂಶೋಧಕರು
ಅಮಿತ ಆಳ್ವ

ಮಾರ್ಗದರ್ಶಕರು
ಡಾ. ವಿ. ಬಾಸಿಲ್ ಹನ್ಸ್
ಸಂಶೋಧನಾ ಮಾರ್ಗದರ್ಶಕರು
ಕರ್ನಾಟಕ ತಿಯೊಲಾಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು - ೫೭೫೦೦೧




೨೦೧೦



ಕರ್ನಾಟಕ ತಿಯೊಲಾಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು - ೫೭೫ ೦೦೧

# ಮಹಿಳಾ ಅಧ್ಯಾಪಿಕೆಯರು ಮತ್ತು ಅಭಿವೃದ್ಧಿ – ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಾಲೇಜು ಶಿಕ್ಷಣದ ಒಂದು ಅಧ್ಯಯನ



ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ
ಸಂಪ್ರಬಂಧ



ಸಂಶೋಧಕರು
ಅಮಿತ ಆಳ್ವ

ಮಾರ್ಗದರ್ಶಕರು
ಡಾ। ವಿ. ಬಾಸಿಲ್ ಹನ್ಸ್
ಸಂಶೋಧನಾ ಮಾರ್ಗದರ್ಶಕರು
ಕರ್ನಾಟಕ ತಿಯೊಲಾಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು – ೫೭೫೦೦೧




೨೦೧೦



ಕರ್ನಾಟಕ ತಿಯೊಲಾಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು – ೫೭೫ ೦೦೧

# ಯೋಗ್ಯತಾ ಪತ್ರ

**ಅಮಿತ ಆಳ್ವರವರು** ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ **"ಮಹಿಳಾ ಅಧ್ಯಾಪಿಕೆಯರು ಮತ್ತು ಅಭಿವೃದ್ಧಿ: ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಾಲೇಜು ಶಿಕ್ಷಣದ ಒಂದು ಅಧ್ಯಯನ"** ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು **ಎಂ.ಫಿಲ್. ಪದವಿ** ಪ್ರಾಪ್ತಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯದಲ್ಲಿ ಸಲ್ಲಿಸಬೇಕೆಂದು ಸಿದ್ಧಪಡಿಸಿದ್ದಾರೆ. ಈ ಸಂಪ್ರಬಂಧವು ಸಂಶೋಧಕರ ಸ್ವಂತ ಪರಿಶ್ರಮ, ವಿಶ್ಲೇಷಣೆ, ಅಭಿಪ್ರಾಯ ಸಂಗ್ರಹ ಮತ್ತು ಸಂಶೋಧನೆಯ ಫಲಸ್ವರೂಪವಾಗಿದೆ. ಇವರು ಸಂಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಇನ್ನಿತರ ಉದ್ದೇಶಗಳಿಗಾಗಿಯಾಗಲಿ ಬಳಸಿಕೊಂಡಿಲ್ಲ.

ದಿನಾಂಕ: 23-08-2010

**ಡಾ। ವಿ. ಬಾಸಿಲ್ ಹನ್ಸ್**
ಸಂಶೋಧನಾ ಮಾರ್ಗದರ್ಶಕರು
ಕರ್ನಾಟಕ ತಿಯೊಲಾಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು.

# ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯದ **ಎಂ.ಫಿಲ್.** ಪದವಿಗಾಗಿ ಸಾದರ ಪಡಿಸಿದ **"ಮಹಿಳಾ ಅಧ್ಯಾಪಿಕೆಯರು ಮತ್ತು ಅಭಿವೃದ್ಧಿ: ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಾಲೇಜು ಶಿಕ್ಷಣದ ಒಂದು ಅಧ್ಯಯನ"** ಎಂಬ ಶೀರ್ಷಿಕೆಯ ಈ ಸಂಪ್ರಬಂಧವು ನನ್ನ ಸ್ವತಂತ್ರ ಕೃತಿಯಾಗಿದ್ದು, ವಿಶ್ಲೇಷಣೆ ಮತ್ತು ಅಧ್ಯಯನದ ಫಲೋದಯವಾಗಿದೆ. ಮಂಗಳೂರಿನ ಕರ್ನಾಟಕ ತಿಯೊಲೊಜಿಕಲ್ ಸಂಶೋಧನಾ ಕೇಂದ್ರದಲ್ಲಿ ಸಂಶೋಧನಾ ಮಾರ್ಗದರ್ಶಕರಾದ **ಡಾ। ವಿ. ಬಾಸಿಲ್ ಹನ್ಸ್** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ ಈ ಸಂಪ್ರಬಂಧವನ್ನು ಬೇರಾವುದೇ ಪದವಿ, ಡಿಪ್ಲೋಮಾ ಅಥವಾ ತತ್ಸಮಾನ ಉಪಾಧಿಗಳ ಪ್ರಾಪ್ತಿಗಾಗಿ ಅಥವಾ ಆರ್ಥಿಕ ಲಾಭಕ್ಕಾಗಿ ಇಡಿಯಾಗಿ ಅಥವಾ ಬಿಡಿಯಾಗಿ ಬಳಸಿಕೊಂಡಿಲ್ಲವೆಂದು ನಾನು ಈ ಮೂಲಕ ದೃಢಪಡಿಸುತ್ತೇನೆ.

ದಿನಾಂಕ: 23-08-2010

**ಅಮಿತ ಆಳ್ವ**
ಸಂಶೋಧಕರು
ಕರ್ನಾಟಕ ತಿಯೊಲಾಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು.

# ಮಹಿಳಾ ಅಧ್ಯಾಪಿಕೆಯರು ಮತ್ತು ಅಭಿವೃದ್ಧಿ – ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಾಲೇಜು ಶಿಕ್ಷಣದ ಒಂದು ಅಧ್ಯಯನ

## ಅಧ್ಯಯನದ ವಿವರಗಳು

# ಕೋಷ್ಟಕಗಳ ಪಟ್ಟಿ

# ನಕ್ಷೆಗಳ ಪಟ್ಟಿ

# ಅಧ್ಯಾಯ – ೧

## ಅಧ್ಯಯನದ ಸ್ವರೂಪ ಮತ್ತು ವ್ಯಾಪ್ತಿ

೧.೧ ಶಿಕ್ಷಣದ ಮೂಲ

೧.೨ ಶಿಕ್ಷಣದ ಗುರಿ

೧.೩ ಶಿಕ್ಷಣದ ವ್ಯಾಖ್ಯೆಗಳು

೧.೪ ಶಿಕ್ಷಣದ ಮಹತ್ವ

೧.೫ ಶಿಕ್ಷಣದ ವಿಧಗಳು

೧.೬ ಅಧ್ಯಯನದ ಗುರಿ, ಉದ್ದೇಶ ಮತ್ತು ವ್ಯಾಪ್ತಿ

೧.೭ ಪ್ರಮೇಯಗಳು

೧.೮ ದತ್ತಾಂಶಗಳ ಸಂಗ್ರಹಣಾ ವಿಧಾನ

# ಅಧ್ಯಾಯ – ೧

# ಅಧ್ಯಯನದ ಸ್ವರೂಪ ಮತ್ತು ವ್ಯಾಪ್ತಿ

## ಪ್ರವೇಶ

ಶಿಕ್ಷಣ ಎಂದಾಕ್ಷಣ ನಮ್ಮ ಕಲ್ಪನೆಗೆ ಸಿಗುವಂತಹವುಗಳೆಂದರೆ – ಶಾಲೆ, ಮಕ್ಕಳು, ಉಪಾಧ್ಯಾಯರು, ಪುಸ್ತಕಗಳು, ಲೇಖನಿಗಳು, ಆಟದ ಮೈದಾನ ಇತ್ಯಾದಿ. 'ನಹಿಜ್ಞಾನೇನ ಸದೃಶಂ' ಎಂಬ ಸೂಕ್ತಿಯಂತೆ ಜ್ಞಾನಕ್ಕಿಂತ ಮಿಗಿಲಾದುದು ಬೇರೊಂದಿಲ್ಲ ಎಂಬುದು ಅರ್ಥಗರ್ಭಿತ. ಶಿಕ್ಷಣವೇ ಶಕ್ತಿ ಎಂದು ಹೇಳುವಂತೆ ಶಿಕ್ಷಣ ಮಾನವನ ನಿಪುಣತೆ ಮತ್ತು ಸಾಮರ್ಥ್ಯವನ್ನು ಹೆಚ್ಚಿಸುವಲ್ಲಿ ಮಹತ್ವಪೂರ್ಣ ಸ್ಥಾನಪಡೆದಿದೆ. 'ವಿದ್ಯಾವಿಹೀನಂ ಪಶುಸಮಾನಂ' ಎಂಬ ಸಂಸ್ಕೃತ ಲೋಕೋಕ್ತಿಯು ಶಿಕ್ಷಣವು ಮಾನವನನ್ನು ಪಶುತ್ವದಿಂದ ಮಾನವತ್ವದೆಡೆಗೆ ಒಯ್ಯುವ ಸಾಧನ ಎಂದು ಗುರುತಿಸುತ್ತದೆ. ಕನ್ನಡದ ಸರ್ವಜ್ಞ ಕವಿ "ವಿದ್ಯೆಯುಳ್ಳವನ ಮುಖವು ಮುದ್ದು ಬರುವಂತಿಕ್ಕು; ವಿದ್ಯೆ ಇಲ್ಲದವನ ಬರಿಮುಖವು ಹಾಳೂರ ಹದ್ದಿನಂತಿಕ್ಕು" ಎಂದಿರುವುದನ್ನು ಗಮನಿಸಿದರೆ ಶಿಕ್ಷಣದ ಮಹತ್ವ ಅರ್ಥವಾಗುತ್ತದೆ (ಶಿಶಿಲ, ೨೦೦೨). ಕೊಠಾರಿ ಆಯೋಗ (೧೯೬೪–೧೯೬೬) ಹೇಳಿರುವಂತೆ, "ಭಾರತದ ಭವಿಷ್ಯ ಆದರ ತರಗತಿ–ಕೊಠಡಿಗಳಲ್ಲಿ ರೂಪಗೊಳ್ಳುವುದು" (ಜಗನ್ನಾಥ್ ಮತ್ತು ರಾಮಕೃಷ್ಣ, ೨೦೦೮).

ವ್ಯಕ್ತಿತ್ವ ನಿರ್ಮಾಣ ಶಿಕ್ಷಣದ ಅತ್ಯಂತ ಪರಿಣಾಮಕಾರಿ ಅಂಶವಾಗಿದೆ. ಮಗು ಬೆಳೆದಂತೆ ಆದರ ಆಸಕ್ತಿ, ಆಕಾಂಕ್ಷೆಗಳನ್ನು ಗುರುತಿಸಿ, ಅವುಗಳನ್ನು ಕಾರ್ಯರೂಪಕ್ಕೆ ತರಲು ನೆರವಾಗುವ ವ್ಯಕ್ತಿತ್ವವನ್ನು ಶಿಕ್ಷಣವು ರೂಪಿಸುತ್ತದೆ. ಶಿಕ್ಷಣವಿಲ್ಲದೆ ಸಮಾಜದ ಬದಲಾವಣೆ ಸಾಧ್ಯವಿಲ್ಲ. ಸಮಾಜದಲ್ಲಿನ ಬದಲಾವಣೆಗಳು ಕೇವಲ ಅವೈಜ್ಞಾನಿಕವಲ್ಲ. ಪ್ರಜ್ಞಾವಂತಿಕೆಯಿಂದ, ವೈಜ್ಞಾನಿಕತೆಯಿಂದ ಸಮಾಜದ ಬದಲಾವಣೆಗಳನ್ನು ಗುರುತಿಸಲು ಅವುಗಳಿಗನುಸಾರವಾಗಿ ಹೊಂದಿಕೊಳ್ಳಲು ನೆರವಾಗುತ್ತದೆ. ರಾಜಾರಾಮ್ ಮೋಹನ್‌ರಾಯ್, ಸ್ವಾಮಿ ದಯಾನಂದ ಸರಸ್ವತಿ, ಸ್ವಾಮಿ ವಿವೇಕಾನಂದ, ಮಹಾತ್ಮಾಗಾಂಧಿ ಮುಂತಾದ ಶಿಕ್ಷಣವೇತ್ತರು ಹಾಗೂ ಸಮಾಜದ ಸುಧಾರಕರು ಸಮಾಜದ ಪ್ರಗತಿಗೆ, ಜನತೆಯ ಕಲ್ಯಾಣಕ್ಕೆ ಶಿಕ್ಷಣದ ಪ್ರಾಮುಖ್ಯತೆಯನ್ನು ಅರುಹಿದ್ದರು. ಶಿಕ್ಷಣವು ವ್ಯಕ್ತಿಯಲ್ಲಿ ಜೀವನ ವಿನ್ಯಾಸಗಳಲ್ಲಿ ಯೋಚನಾ ವಿಧಗಳಲ್ಲಿ ವೃತ್ತಿ ಅವಕಾಶಗಳಲ್ಲಿ ಸೂಕ್ತ ಮಾರ್ಪಾಟನ್ನು ತರುತ್ತದೆ (ರಘು, ೧೯೯೯). ಕಲಿಕೆಗೆ ಲಿಂಗ, ವಯಸ್ಸು ಮುಂತಾದವುಗಳಿಂದ ಅಡಚಣೆಗಳುಂಟಾಗಬಾರದು. ಶಿಕ್ಷಣ ವ್ಯಕ್ತಿತ್ವ ವಿಕಸನವನ್ನು ಉತ್ತೇಜಿಸಿ ಜನ–ಸಾಂಸ್ಥಿಕ ಸಂಪರ್ಕ–ಸಂಬಂಧಗಳ

ಸೇತುವೆಯನ್ನು ನಿರ್ಮಿಸಿತ್ತದೆ. ಹೀಗಾಗಿ ಜ್ಞಾನವು ಅಭಿವೃದ್ಧಿಯಲ್ಲಿ ಒಂದು ಪ್ರಮುಖ ಮೂಲ ಸೌಕರ್ಯವಾಗಿದೆ. (ಹರೀಶ್, ಜಯಶೀಲ ಮತ್ತು ಹನ್ಸ್, ೨೦೦೭). ಇಂಥಾ ಅಮೂಲ್ಯ ಆಸ್ತಿ ಪಡೆಯುವ ಹೆಣ್ಮಕ್ಕಳು ಶಿಕ್ಷಣ ರಂಗದಲ್ಲಿ ದುಡಿಯುವಾಗ ಸಮಾಜಮುಖಿಗಳಾಗಿ ಅಭಿವೃದ್ಧಿಗೆ ಪೂರಕವಾದ ಪಾತ್ರವನ್ನು ಹೇಗೆ ವಹಿಸಬಲ್ಲರು ಎಂಬುದು ಸಂಶೋಧನಾ ಯೋಗ್ಯ ಪ್ರಸ್ತಾಪವಾಗಿದೆ.

## ೧.೧ ಶಿಕ್ಷಣದ ಮೂಲ

ಶಿಕ್ಷಣ ಎಂಬ ಪದವು ಲ್ಯಾಟಿನ್ ಭಾಷೆಯ 'ಎಡ್ಯುಕೇರ್' ಎಂಬ ಪದದಿಂದ ಜನಿಸಿದೆ. ಈ ಪದವು ಹೊರಬರುವುದು, ಬೆಳೆಸುವುದು ಇತ್ಯಾದಿ ಅರ್ಥಗಳನ್ನೊಳಗೊಂಡಿದೆ. ಅಂದರೆ ಶಿಕ್ಷಣದ ಕಾರ್ಯವು ವ್ಯಕ್ತಿಯಲ್ಲಿ ಅಡಗಿರುವ ಸ್ವಸಾಮರ್ಥ್ಯವನ್ನು, ಶಕ್ತಿಯನ್ನು ಹೊರ ಬರುವಂತೆ ಮಾಡುವುದು. ವ್ಯಕ್ತಿಗಳಲ್ಲಿ ವ್ಯಕ್ತಿತ್ವ ಬೆಳೆಸುವುದು ಎಂದು ಅರ್ಥೈಸಬಹುದು.

ಪ್ರಾಚೀನ ಭಾರತದಲ್ಲಿ ಶಿಕ್ಷಣದ ಪದ್ಧತಿಯು ಗುಣನಡತೆಯನ್ನು ಅಭಿವೃದ್ಧಿ ಪಡಿಸುವುದು, ವ್ಯಕ್ತಿತ್ವವನ್ನು ಬೆಳೆಸುವುದು ಮತ್ತು ತಾಯ್ನಾಡಿನ ಪ್ರಾಚೀನ ಸಂಸ್ಕೃತಿಯನ್ನು ಸಂರಕ್ಷಿಸುವುದಾಗಿದೆ. ಆದರೆ ಭಾರತದಲ್ಲಿ ಬ್ರಿಟಿಷರ ಆಳ್ವಿಕೆಯಿಂದಾಗಿ ಶಿಕ್ಷಣ ವ್ಯವಸ್ಥೆಯಲ್ಲಿ ಮಹತ್ವದ ಬದಲಾವಣೆಯಾಯಿತು. ಭಾರತಕ್ಕೆ ಸ್ವಾತಂತ್ರ್ಯ ಬಂದ ನಂತರ ಪುನಃ ನಾವು ಪ್ರಾಚೀನ ಸಂಸ್ಕೃತಿಯನ್ನೇ ಕಂಡುಹಿಡಿಯಬೇಕಾಯಿತು. ಶಿಕ್ಷಣವು ವೈಯಕ್ತಿಕವಾದ ಸಂತುಲಿತ ಗುರಿಯನ್ನು ಜ್ಞಾನ ಮತ್ತು ಬುದ್ಧಿವಂತಿಕೆಯನ್ನು ಒಳಗೊಂಡಿದೆ (ಹೆರಾಲ್ಡ್, ೧೯೮೬).

## ೧.೨ ಶಿಕ್ಷಣದ ಗುರಿ

ಶೈಕ್ಷಣಿಕ ಸಮಾಜದ ಶಿಕ್ಷಣದ ಗುರಿಗಳಲ್ಲಿ ಮುಖ್ಯವಾಗಿ ವೈಯಕ್ತಿಕ ಹಾಗೂ ಸಾಮಾಜಿಕ ವಿಚಾರಗಳಲ್ಲಿ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಟ್ಟಿರಬೇಕು. ಶಿಕ್ಷಣವು ವೈಯಕ್ತಿತ ಅಭಿವೃದ್ಧಿಗೆಂದೇ ಅಥವಾ ಜ್ಞಾನ ಸಂಪಾದನೆಗೆಂದೇ ಸೀಮಿತವಾಗಿರಬಾರದು. ಶಿಕ್ಷಣದ ಗುರಿಗಳು ಇವುಗಳಿಗಿಂತ ಉನ್ನತವಾಗಿರಬೇಕೆಂಬ ಭಾವನೆಗಳು ನಮ್ಮಲ್ಲಿ ಬೆಳೆಯಬೇಕು.

ಶಿಕ್ಷಣವು ನಾಲ್ಕು ಹಂತಗಳನ್ನು ಒಳಗೊಂಡಿದೆ. ಅವುಗಳೆಂದರೆ ಕಲಿಯುವಿಕೆ, ವ್ಯಾವಹಾರಿಕ ಅನುಭವ, ಸಂಶೋಧನೆ ಮತ್ತು ತರಬೇತಿ. ಶಿಕ್ಷಣದ ಮುಖ್ಯ ಗುರಿಗಳು ಕೆಳಗಿನಂತವೆ.

- ವಿದ್ಯಾರ್ಥಿಗಳಲ್ಲಿ ಹಾಗೂ ಉಪಾಧ್ಯಾಯರುಗಳಲ್ಲಿ ಸಾಮಾಜಿಕ ಕರ್ತವ್ಯಗಳನ್ನು ತಿಳಿಸುವುದು.
- ಪ್ರಜಾಪ್ರಭುತ್ವಯುತವಾದ ರೀತಿಯಲ್ಲಿ ಜೀವನವನ್ನು ಕಲಿಸಲು ಬೇಕಾದ ಸನ್ನಿವೇಶಗಳನ್ನು ರಚಿಸಲು ಸಹಕರಿಸುವುದು.
- ಭವಿಷ್ಯದ ಜೀವನಕ್ಕೆ ಬೇಕಾಗುವಂತಹ ವೈಯಕ್ತಿಕ ವೃತ್ತಿ ಮಾರ್ಗಸೂಚಿಗಳನ್ನು ರಚಿಸುವುದು.
- ಉತ್ತಮ ಪೌರತ್ವ ತರಬೇತಿಯನ್ನು ಕೊಡುವುದು.
- ವಿರಾಮ ವೇಳೆಯ ಕಾಲವನ್ನು ಉಪಯೋಗಿಸಿಕೊಳ್ಳುವುದು ಹೇಗೆ ಎಂಬುದನ್ನು ಅರ್ಥಮಾಡಿ ಕೊಳ್ಳುವ ಶಕ್ತಿಯನ್ನು ತುಂಬಿಸಿಕೊಡುವುದು. (ನಾಗರಾಜ್, ೨೦೦೧)
- ಸಶಕ್ತೀಕರಣದ ಪ್ರಬಲ ಅಸ್ತ್ರವಾಗಿ ಶಿಕ್ಷಣವನ್ನು ಬಳಸುವುದು (ಜಗನ್ನಾಥ್ ಮತ್ತು ರಾಮಕೃಷ್ಣ, ೨೦೦೮).

## ೧.೩ ಶಿಕ್ಷಣದ ವ್ಯಾಖ್ಯೆಗಳು

ಅಕ್ಷರ ಜ್ಞಾನವಿಲ್ಲದ ಮನುಷ್ಯ ಪಶುಸಮಾನ. ಶಿಕ್ಷಣವು ಪ್ರಜ್ಞೆಯ ಅಭಿವೃದ್ಧಿಯ, ಸಮಾಜದ ಮರುಸಂಘಟನೆಯ ಮತ್ತು ಆರ್ಥಿಕ ಅಭಿವೃದ್ಧಿಯ ಮೂಲ ಸಾಧನವಿದ್ದಂತೆ. ಶಿಕ್ಷಣದ ಪಾತ್ರವನ್ನು ಸಮರ್ಥವಾಗಿ ಮನಗಂಡಿದ್ದ ರಾಷ್ಟ್ರಪಿತ ಮಹಾತ್ಮಾಗಾಂಧೀಜಿ ಶಿಕ್ಷಣವನ್ನು ''ಪ್ರಜ್ಞೆಯ, ಅಭಿವೃದ್ಧಿಯ ಮತ್ತು ಸಮಾಜದ ಮರು ಸಂಘಟನೆಯ ಮೂಲ ಸಾಧನ! ಶರೀರ, ಮನಸ್ಸು ಮತ್ತು ಚೈತನ್ಯಗಳ ಬೆಳವಣಿಗೆಯೇ ಶಿಕ್ಷಣ'' ಎಂದಿದ್ದಾರೆ.

ಡಾ। ಬಿ.ಆರ್. ಅಂಬೇಡ್ಕರ್‌ರವರು ಶಿಕ್ಷಣದಿಂದ ಮಾತ್ರ ಶೋಷಣೆಯ ನಿರ್ಮೂಲನ ಸಾಧ್ಯವೆಂದು ತಿಳಿದಿದ್ದರು. ''ಶಿಕ್ಷಣವೊಂದೇ ದಲಿತರನ್ನು ಮೇಲಕ್ಕೆತ್ತುವ ಸಾಧನ. ಓದು, ಓದು ಎಡೆಬಿಡದೆ ಓದು ಮತ್ತು ಆಳವಾದ ಚಿಂತನೆಗಳಿಂದ ನಮ್ಮ ಬುದ್ಧಿವಂತಿಕೆಯನ್ನು ಹೆಚ್ಚಿಸಬೇಕು, ವೈಚಾರಿಕವಾಗಿ ಚಿಂತಿಸಬೇಕು. ಆಗ ಮಾತ್ರ ದಲಿತರು ಮೇಲಕ್ಕೆ ಬರಲು ಸಾಧ್ಯವಾಗುತ್ತದೆ'' ಎಂದು ಅಂಬೇಡ್ಕರ್ ಆಗಾಗ ಹೇಳುತ್ತಿದ್ದರು. (ಭಾಟಿಯಾ, ೧೯೭೪)

ಸ್ವಾಮಿ ವಿವೇಕಾನಂದರ ಪ್ರಕಾರ "ಶಿಕ್ಷಣ ಕೊಡುವಂತಹದ್ದಲ್ಲ ಅದು ವ್ಯಕ್ತಿಗಳಲ್ಲೇ ಇರುವುದು. ಆದರೆ ಅಭಿವೃದ್ಧಿ ಕಾರ್ಯವೇ ಶಿಕ್ಷಣದ ಮೂಲ ಉದ್ದೇಶವಾಗಿದೆ." "ಶಿಕ್ಷಣದ ರಕ್ಷಣೆಯಷ್ಟೇ ಮುಖ್ಯ" ಎಂದು ಖ್ಯಾತ ಶಿಕ್ಷಣ ತಜ್ಞ ಡಾ। ಎಚ್. ನರಸಿಂಹಯ್ಯ ಅವರು ಹೇಳುತ್ತಿದ್ದರು.

ಬ್ರೌನ್‌ರ ಹೇಳಿಕೆಯಂತೆ "ಶಿಕ್ಷಣವು ಜನತೆಯ ವರ್ತನೆಗಳಲ್ಲಿ ಬದಲಾವಣೆಗಳನ್ನು ತರುತ್ತದೆ. ಜನತೆಗೆ ಬುದ್ಧಿಶಕ್ತಿ ಹಾಗೂ ಸಾಮರ್ಥ್ಯವನ್ನು ಹೆಚ್ಚಿಸಿ ಅವರ ಕ್ರಿಯಾತ್ಮಕ ಭಾವನೆಗಳನ್ನು ಪ್ರೇರೇಪಿಸಿ ಹೊಸ ಹೊಸ ಆಲೋಚನೆಗಳನ್ನು ಹೊರ ಹೊಮ್ಮಿಸಿ ನೈಜತೆಯಿಂದ ಭವಿಷ್ಯದಲ್ಲಿ ಬದುಕಲು ಅವಕಾಶ ಮಾಡಿಕೊಡುವುದೇ ಆಗಿದೆ."

ಆ್ಯಡಂ ಸ್ಮಿತರ ಪ್ರಕಾರ – "ಶಿಕ್ಷಣ ಇಲ್ಲವೆ ಅಧ್ಯಯನದ ತರಬೇತಿಯ ಅವಧಿಯಲ್ಲಿ ದೊರಕಿಸಿಕೊಳ್ಳುವ ಪರಿಣತಿಗೆ ಯಾವಾಗಲೂ ನೈಜ ಬೆಲೆಯನ್ನು ಕೊಡಬೇಕಾಗುವುದು. ಇದು ವ್ಯಕ್ತಿಯ ಸ್ಥಿರ ಹಾಗೂ ಪೂರ್ಣಗೊಂಡ ಬಂಡವಾಳ. ಆ ಪರಿಣತಿಯು ಅವನ ಭವಿಷ್ಯದ ಭಾಗ್ಯವಿದ್ದಂತೆ, ಅದು ಅವನ ಸಮಾಜಕ್ಕೂ ಅನ್ವಯಿಸುತ್ತದೆ." ಈ ವ್ಯಾಖ್ಯೆಯಲ್ಲಿ ಶಿಕ್ಷಣದ ಮಟ್ಟವು ಪರಿಪೂರ್ಣವಾದ ಸ್ಥಿರ ಬಂಡವಾಳವೆಂಬುದನ್ನು ಗಮನಿಸಬೇಕು. ಇನ್ನಿತರ ರೀತಿಯ ಬಂಡವಾಳ ತೊಡಗಣೆಗಿಂತ ಶಿಕ್ಷಣದ್ದು ಅನ್ಯ ರೀತಿಯದ್ದು ಹಾಗೂ ದೀರ್ಘಕಾಲದ ಉತ್ಪಾದನೆಯನ್ನು ಕೊಡಬಲ್ಲದು (ಶಿಶಿಲ, ೨೦೦೨).

## ೧.೪ ಶಿಕ್ಷಣದ ಮಹತ್ವ

ಶಿಕ್ಷಣವು ಅಭಿವೃದ್ಧಿಯ ಮೂಲಮಂತ್ರ ಹಾಗೂ ಸಾಮಾಜಿಕ ಪರಿವರ್ತನೆಯ ಮೂಲ ಸಾಧನ. ಶಿಕ್ಷಣವನ್ನು ಅಲಕ್ಷಿಸಿ ಯಾವುದೇ ದೇಶ ಮುಂದುವರಿಯುವುದು ಸಾಧ್ಯವಿಲ್ಲ. ಶಿಕ್ಷಣವೆಂದರೆ "ಪ್ರಾಣಿರೂಪದಲ್ಲಿರುವ ಮಾನವನನ್ನು ಮಾನವತ್ವದೆಡೆಗೆ ಒಯ್ಯುವ ಸಾಧನ."

ದೇಶದ ಅಥವಾ ಸಮಾಜದ ಪ್ರಗತಿಯಾಗಬೇಕಾದರೆ ಮಾನವ ಸಂಪತ್ತಿನ ಅಭಿವೃದ್ಧಿಯಾಗ ಬೇಕಾಗುತ್ತದೆ. ಜನತೆಯ ಅಥವಾ ಮಾನವ ಸಂಪನ್ಮೂಲಗಳ ಗುಣಮಟ್ಟದ ಅಳತೆ ಶಿಕ್ಷಣ ಕಾರ್ಯದಿಂದಾಗಬೇಕು. ಮಾನವ ಸಂಪನ್ಮೂಲಗಳ ಅಭಿವೃದ್ಧಿಯು ಸಮಾಜದ ಎಲ್ಲ ಜನರ ಜ್ಞಾನ, ಕುಶಲತೆ, ಸಾಮರ್ಥ್ಯಗಳನ್ನು ಹೆಚ್ಚಿಸುವುದೇ ಆಗಿದೆ. ಆರ್ಥಿಕ ಚಿಂತನೆಯಲ್ಲಿ ಜನತೆಯ ಬಂಡವಾಳದ ಕ್ರೋಢೀಕರಣ ಹಾಗೂ ಆರ್ಥಿಕ ಬೆಳವಣಿಗೆಯಲ್ಲಿ ಸೂಕ್ತ ಅಳವಡಿಕೆ ಎಂದಾಗುತ್ತದೆ. ರಾಜಕೀಯ ಅರ್ಥದಲ್ಲಿ ಜನತೆಯನ್ನು

ಪ್ರೌಢರನ್ನಾಗಿಸಿ ಅವರಿಗೆ ಮಾನವ ಹಕ್ಕು ಮತ್ತು ಕರ್ತವ್ಯಗಳ ಜ್ಞಾನ ಬೆಳೆಸಿ, ರಾಜಕೀಯ ಕ್ಷೇತ್ರದಲ್ಲಿ ಸಕ್ರಿಯ ಪಾತ್ರ ವಹಿಸುತ್ತದೆ (ಮೊಹಂತಿ, ೧೯೮೨).

ಶಿಕ್ಷಣ ಚಿಂತನೆಯ ಇತಿಹಾಸದಲ್ಲಿ ಶಿಕ್ಷಣ ಮಾಧ್ಯಮವನ್ನು ಆರ್ಥಿಕ ಬೆಳವಣಿಗೆಯ ಹೊಸ ವಿಷಯವೆಂದು ಪರಿಗಣಿಸಲಾಗಿದೆ. ತಾಂತ್ರಿಕ ಮತ್ತು ವೈಜ್ಞಾನಿಕ ಸಂಶೋಧನೆಗಳಿಂದ ಮಾನವ ಸಂಪತ್ತುಗಳ ಅಭಿವೃದ್ಧಿಯು ಕೂಡ ಶಿಕ್ಷಣವೆಂಬ ಬಂಡವಾಳದ ಮೂಲಕ ಆಗುತ್ತಿದೆ. ಶಿಕ್ಷಣದಿಂದ ಕೌಶಲ್ಯಯುತ, ಜ್ಞಾನವಂತ, ಉಪಯುಕ್ತ ಮಾನವ ಸಂಪತ್ತುಗಳ ತಯಾರಿಕೆ ಆಗುತ್ತದೆ (ಜ್ಯೋತಿ, ೨೦೦೭).

ಮಗುವೊಂದು ಹುಟ್ಟಿದ ಕ್ಷಣದಿಂದಲೇ ಕಲಿಕೆಯನ್ನು ಆರಂಭಿಸುತ್ತದೆ ಎನ್ನಬಹುದು. ಪ್ರತಿಯೊಂದು ಸಾಮಾಜಿಕ ವ್ಯವಸ್ಥೆಗೂ ಅದರದೇ ಆದ ಸಂಸ್ಕೃತಿ ಇರುತ್ತದೆ. ಆಯಾ ಸಮಾಜದ ಸದಸ್ಯರು ತಿಳುವಳಿಕೆ ಹೊಂದಿ ಆ ಸಮಾಜದ ಸಂಸ್ಕೃತಿಯನ್ನು ಮುಂದಿನ ಪೀಳಿಗೆಗೆ ಕೊಂಡೊಯ್ಯಬೇಕಾಗುತ್ತದೆ (ಪಲಿವಾಲ್, ೧೯೮೪).

ಶಿಕ್ಷಣವು ಸಮಾಜದ ಇತಿಹಾಸ ಸಾಧನೆಗಳು, ಧರ್ಮ, ಭಾಷೆ ಮೌಲ್ಯಗಳು, ಸಾಹಿತ್ಯ, ಕಲೆ, ತಂತ್ರಜ್ಞಾನ ಮುಂತಾದ ಎಲ್ಲ ಜ್ಞಾನ ಹಾಗೂ ಸಾಂಸ್ಕೃತಿಕ ಅಂಶಗಳನ್ನು ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ವರ್ಗಾಯಿಸುತ್ತದೆ. ಶಿಕ್ಷಣ ಎಂದರೆ ಮೂಲಭೂತವಾಗಿ ಕಲಿಕೆ, ಅರಿವು, ಅನುಭವ ಹಾಗೂ ಜ್ಞಾನಾರ್ಜನೆ ಎಂದು ಅರ್ಥೈಸಬಹುದು. ಶಿಕ್ಷಣವು ವ್ಯಕ್ತಿಗೆ ಜ್ಞಾನ ಹಾಗೂ ತಿಳುವಳಿಕೆ ನೀಡುತ್ತದೆ. ಮುಖ್ಯವಾಗಿ ವ್ಯಕ್ತಿ ತನ್ನನ್ನು ತಾನು ತಿಳಿಯಲು ಬುದ್ಧಿಶಕ್ತಿಯನ್ನು ಬೆಳೆಸಿಕೊಳ್ಳಲು ಜೀವನದ ಪರಿಸ್ಥಿತಿಯನ್ನು ಉತ್ತಮಪಡಿಸಲು ಶಿಕ್ಷಣ ಆತ್ಯಗತ್ಯ. ಎಲ್ಲಕ್ಕಿಂತ ಹೆಚ್ಚಾಗಿ ಕುಟುಂಬ ಹಾಗೂ ಸಮಾಜದಲ್ಲಿ ಸಾಮರಸ್ಯ, ಶಾಂತಿ, ನೆಮ್ಮದಿ ನೆಲೆಸುವಂತೆ ಮಾಡಲು ಶಿಕ್ಷಣ ಅಗತ್ಯ ಹಾಗೂ ಅನಿವಾರ್ಯ (ಜಾನ್, ೨೦೦೮).

ಶಿಕ್ಷಣವು ವಹಿಸುವ ಪಾತ್ರ ಮತ್ತು ಅದರ ಮಹತ್ವವನ್ನು ಈ ಕೆಳಗಿನ ಅಂಶಗಳು ಸ್ಪಷ್ಟಪಡಿಸುತ್ತವೆ.

- **ಜ್ಞಾನ ಸಂಪಾದನೆ:** ಶಿಕ್ಷಣದ ಅತಿ ಮುಖ್ಯವಾದ ಉದ್ದೇಶವೆಂದರೆ ಜ್ಞಾನ ಸಂಪಾದನೆ. ಶಿಕ್ಷಣದಿಂದ ಜನರು ಸಾಮಾಜಿಕ, ಆರ್ಥಿಕ, ರಾಜಕೀಯ, ವೈಜ್ಞಾನಿಕ, ವೈಚಾರಿಕ, ನೈತಿಕ, ತಾತ್ವಿಕ ಮುಂತಾದ ಎಲ್ಲಾ ರೀತಿಯ ಜ್ಞಾನ ಸಂಪಾದನೆ ಮಾಡುವುದು ಸಾಧ್ಯವಾಗುತ್ತದೆ. ಇದರಿಂದಾಗಿ ಜನರು ಬುದ್ಧಿಶಕ್ತಿ ಸುಧಾರಿಸುತ್ತದಲ್ಲದೆ ಅವರ ಬುದ್ಧಿ ಕೌಶಲ ವಿಕಸನಗೊಳ್ಳುತ್ತದೆ.

- **ಅಜ್ಞಾನ, ಅಂಧಕಾರದ ನಿರ್ಮೂಲನೆ:** ಜನರು ಹುಟ್ಟುತ್ತಲೇ ಬುದ್ಧಿವಂತರು ಮತ್ತು ವಿಚಾರವಂತರು ಆಗಿರುವುದಿಲ್ಲ. ಅದರಲ್ಲೂ ಮುಖ್ಯವಾಗಿ ಭಾರತದಂತಹ ದೇಶಗಳಲ್ಲಿ ವಿವಿಧ ಕಾರಣಗಳಿಂದಾಗಿ ಜನರು ಮೌಢ್ಯರು, ಅಜ್ಞಾನಿಗಳು, ಕಂದಾಚಾರಿಗಳು ಹಾಗೂ ಸಂಪ್ರದಾಯವಾದಿಗಳು ಆಗಿರುತ್ತಾರೆ. ಅವರ ಈ ಮೌಢ್ಯವನ್ನು ತೊಡೆದು ಗಾಢಾಂಧಕಾರದಿಂದ ಹೊರತರಬೇಕೆಂದರೆ ಶಿಕ್ಷಣ ಬೇಕು. ಶಿಕ್ಷಣ ಜನರ ವಿವೇಚನಾ ಶಕ್ತಿಯನ್ನು ಹೆಚ್ಚಿಸುತ್ತದೆ.

- **ನೈಪುಣ್ಯ ಮತ್ತು ಸಾಮರ್ಥ್ಯದ ವೃದ್ಧಿ:** ಶಿಕ್ಷಣ ಜನರ ಬುದ್ಧಿಕೌಶಲ ಮತ್ತು ನೈಪುಣ್ಯತೆಯನ್ನು ಸುಧಾರಿಸುವುದರ ಮೂಲಕ ಕಾರ್ಯದಕ್ಷತೆಯನ್ನು ಹೆಚ್ಚಿಸುತ್ತದೆ. ಇದರಿಂದಾಗಿ ಅವರ ಉತ್ಪಾದನಾ ಸಾಮರ್ಥ್ಯ ವೃದ್ಧಿಗೊಳ್ಳುತ್ತದೆ. ಇದು ದೇಶದ ಅಭಿವೃದ್ಧಿಗೆ ಪೂರಕವಾಗಿ ಕಾರ್ಯ ನಿರ್ವಹಿಸುತ್ತದೆ.

- **ನೈತಿಕ ಬೆಳವಣಿಗೆ:** ಶಿಕ್ಷಣ ನೈತಿಕ ಮೌಲ್ಯಗಳ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಜನರ ಮನೋಸ್ಥೈರ್ಯ ಸುಧಾರಿಸುತ್ತದೆ ಹಾಗೂ ಉತ್ತಮ ಮೌಲ್ಯಗಳ ಬೆಳವಣಿಗೆ ದೇಶದ ಅಭಿವೃದ್ಧಿಗೆ ಪೂರಕವಾಗುತ್ತದೆ.

- **ಸಂಸ್ಕೃತಿ ರಕ್ಷಣೆ:** ಶಿಕ್ಷಣ ನಾಗರಿಕತೆಯನ್ನು ಬೆಳೆಸುತ್ತದೆ ಹಾಗೂ ಜನರ ಸಂಸ್ಕಾರವನ್ನು ಹೆಚ್ಚಿಸುತ್ತದೆ. ಯಾವುದೇ ದೇಶದಲ್ಲಾದರೂ ಒಂದು ನಿರ್ದಿಷ್ಟ ಆಚಾರ–ವಿಚಾರ, ಸಂಸ್ಕೃತಿ, ಕಲೆ, ನಾಗರಿಕತೆ, ಜೀವನ ಪದ್ಧತಿ, ಸಂಪ್ರದಾಯಗಳು ಅಸ್ತಿತ್ವತಲ್ಲಿರುತ್ತವೆ. ಈ ಅಪೂರ್ವ ಸಂಸ್ಕೃತಿ ಮತ್ತು ನಾಗರಿಕತೆಯ ಸಂರಕ್ಷಣೆ ಶಿಕ್ಷಣ ಮತ್ತು ಶಿಕ್ಷಿತ ಜನರಿಂದ ಮಾತ್ರ ಸಾಧ್ಯ.

- **ವ್ಯಕ್ತಿ ವಿಕಸನ:** ಶಿಕ್ಷಣವು ವ್ಯಕ್ತಿ ವಿಕಸನದ ರಹದಾರಿಯಿದ್ದಂತೆ. ಶಿಕ್ಷಣ ಜನರಿಗೆ ಬದುಕುವ ದಾರಿ ಮತ್ತು ವಿಧಾನವನ್ನು ಸೂಸುತ್ತದೆ. ಮನುಷ್ಯ ವಿಚಾರಪೂರ್ವಕ ಆಯ್ಕೆ ಮತ್ತು ನಿರ್ಧಾರ ಮಾಡುವುದನ್ನು ಶಿಕ್ಷಣದ ಮೂಲಕ ಕಲಿಯುತ್ತಾನೆ. ಅವನ ಕ್ರಿಯಾತ್ಮಕತೆ, ವೈಜ್ಞಾನಿಕ ಅರಿವು, ವಿಚಾರವಂತಿಕೆ ಶಿಕ್ಷಣದಿಂದ ಬೆಳೆಯುತ್ತದೆ. ಶಿಕ್ಷಣ ಮನುಷ್ಯನ ಬೌದ್ಧಿಕ ಬೆಳವಣಿಗೆಯ ಪ್ರಾಣವಾಯು ಇದ್ದಂತೆ. ಹೀಗೆ ಶಿಕ್ಷಣವು ವ್ಯಕ್ತಿಯ ಸರ್ವಾಂಗೀಣ ವಿಕಸನದ ಮೂಲ ಸಾಧನವಾಗಿರುತ್ತದೆ.

- **ಅಭಿವೃದ್ಧಿಗೆ ಪೂರಕ:** ಶಿಕ್ಷಣವು ಆರ್ಥಿಕ ಅಭಿವೃದ್ಧಿಗೆ ಪೂರಕವಾಗಿ ಕಾರ್ಯ ನಿರ್ವಹಿಸುತ್ತದೆ. ಅದು ಮಾನವನ ಬುದ್ಧಿಕೌಶಲ್ಯ ನೈಪುಣ್ಯತೆ, ಕಾರ್ಯದಕ್ಷತೆ ಮತ್ತು ಉತ್ಪಾದಕತೆಯನ್ನು ಹೆಚ್ಚಿಸುವ

ಮೂಲಕ ಅಭಿವೃದ್ಧಿಗೆ ಪ್ರೇರಕವಾಗುತ್ತದೆ. ಶಿಕ್ಷಿತ ಜನರು ಆರ್ಥಿಕ ಅಭಿವೃದ್ಧಿಯ ಅಗತ್ಯ ಮತ್ತು ಮಹತ್ವವನ್ನು ಅರ್ಥಮಾಡಿಕೊಳ್ಳುತ್ತಾರೆ ಹಾಗೂ ಅಭಿವೃದ್ಧಿಯ ಚಟುವಟಿಕೆಗಳಲ್ಲಿ ನೇರವಾಗಿ ಪಾಲ್ಗೊಳ್ಳುತ್ತಾರೆ. ಶಿಕ್ಷಣ ಅಭಿವೃದ್ಧಿಯ ಪ್ರಾಣವಾಯುವಿದ್ದಂತೆ. ಶೈಕ್ಷಣಿಕವಾಗಿ ಹಿಂದುಳಿದಿರುವ ದೇಶ ಅಭಿವೃದ್ಧಿಯನ್ನು ಕಾಣಲು ಸಾಧ್ಯವಿಲ್ಲ. ಶಿಕ್ಷಣದಿಂದ ಸಂಶೋಧನೆ ಮತ್ತು ಆವಿಷ್ಕಾರಗಳು ಹೆಚ್ಚುತ್ತದೆ ಹಾಗೂ ಸರ್ವಾಂಗೀಣ ಅಭಿವೃದ್ಧಿ ಸಾಧ್ಯವಾಗುತ್ತದೆ.

- **ಶೋಷಣೆಯ ವಿರುದ್ಧ ಹೋರಾಟ:** ಶಿಕ್ಷಣ ಜನರನ್ನು ಶೋಷಣೆಯ ವಿರುದ್ಧ ಸಿಡಿದೇಳುವಂತೆ ಮಾಡುತ್ತದೆ. ಶಿಕ್ಷಿತ ಜನರು ಹೆಚ್ಚು ಪ್ರಜ್ಞಾವಂತರಾಗಿರುವುದರಿಂದ ಅವರು ಅಷ್ಟು ಸುಲಭವಾಗಿ ಬಲಿಪಶುಗಳಾಗುವುದಿಲ್ಲ. ಶತಶತಮಾನಗಳಿಂದ ನಡೆದು ಬಂದಿರುವ ಶೋಷಣೆಯ ಸಂಕೋಲೆಯಿಂದ ಜನರು ಮುಕ್ತರಾಗಲು, ಬಿಡಿಸಿಕೊಳ್ಳಲು ಪ್ರಯತ್ನಿಸುತ್ತಾರೆ.

- **ರಾಜಕೀಯ ಜಾಗೃತಿ:** ಶಿಕ್ಷಣ ಜನರಲ್ಲಿ ರಾಜಕೀಯ ಜಾಗೃತಿ ಮೂಡಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಪ್ರಜಾಪ್ರಭುತ್ವ ರಾಷ್ಟ್ರದಲ್ಲಿ ಶಿಕ್ಷಿತ ಜನರ ಸಂಖ್ಯೆ ಅಧಿಕವಿದ್ದಾಗ ಪ್ರಜಾಪ್ರಭುತ್ವ ಯಶಸ್ವಿಯಾಗುತ್ತದೆ. ರಾಜಕೀಯ ನಾಗರಿಕರು ತಮಗಿಷ್ಟವಿರುವ ರೀತಿಯಲ್ಲಿ ವರ್ತಿಸುವುದು ಸಾಧ್ಯವಾಗುವುದಿಲ್ಲ. ಜನರಲ್ಲಿ ಜಾಗೃತಿ ಮೂಡಿದರೆ ರಾಜಕೀಯ ಪಕ್ಷಗಳು ಎಚ್ಚರದಿಂದ ಕಾರ್ಯನಿರ್ವಹಿಸುತ್ತದೆ. ಜನಜಾಗೃತಿ ಪ್ರಜಾಪ್ರಭುತ್ವದ ಆಸ್ತಿ ಇದ್ದಂತೆ.

## ೧.೫ ಶಿಕ್ಷಣದ ವಿಧಗಳು

ಶಿಕ್ಷಣದಲ್ಲಿ ಮುಖ್ಯವಾಗಿ ಮೂರು ಪ್ರಕಾರಗಳಿವೆ. ಅವುಗಳೆಂದರೆ ಔಪಚಾರಿಕ ಶಿಕ್ಷಣ, ಅನೌಪಚಾರಿಕ ಶಿಕ್ಷಣ ಮತ್ತು ಪ್ರಾಸಂಗಿಕ ಶಿಕ್ಷಣ. ಈ ಶಿಕ್ಷಣದಿಂದಾಗಿ ಪ್ರತಿಯೊಂದು ವಿದ್ಯಾರ್ಥಿಯಲ್ಲಿಯೂ ಸ್ವಇಚ್ಛೆಯನ್ನು ಹೆಚ್ಚಿಸುವ ಮತ್ತು ಜಗತ್ತನ್ನೇ ಎದುರಿಸುವ ಶಕ್ತಿಯನ್ನು ಹೊಂದಬಹುದು.

**ಔಪಚಾರಿಕ ಶಿಕ್ಷಣ:** ಔಪಚಾರಿಕ ಶಿಕ್ಷಣವು ಶಾಲಾ ಕಾಲೇಜುಗಳಲ್ಲಿ ನೇರವಾಗಿ ಪಡೆಯುವ ಶಿಕ್ಷಣವಾಗಿದೆ. ಈ ಮಾದರಿಯ ಶಿಕ್ಷಣ ಪದ್ಧತಿಯಲ್ಲಿ ಓದುಗರು ಒಂದು ನಿರ್ದಿಷ್ಟ ವಯಸ್ಸಿನಲ್ಲಿ ಶಾಲಾಕಾಲೇಜುಗಳಿಗೆ ಹೋಗಬೇಕೆಂಬ ನಿಯಮವಿರುತ್ತದೆ. ಹಾಗೂ ಶಾಲಾಕಾಲೇಜುಗಳಲ್ಲಿ ಶಿಕ್ಷಕರು, ಗ್ರಂಥಾಲಯ ಸೌಲಭ್ಯಗಳು, ಪ್ರಯೋಗಾಲಯ ಸೌಲಭ್ಯಗಳು ಮುಂತಾದವುಗಳ ಮೂಲಕ ಶಿಕ್ಷಣವನ್ನು ವಿಧಿವತ್ತಾಗಿ, ಕ್ರಮಬದ್ಧವಾಗಿ ಮತ್ತು

ಹಂತಹಂತವಾಗಿ ನೀಡಲಾಗುತ್ತದೆ. ಔಪಚಾರಿಕ ಶಿಕ್ಷಣ ವಿಧಾನದಲ್ಲಿ ಮೂಲ ಮತ್ತು ಪ್ರಾಥಮಿಕ ಶಿಕ್ಷಣ ಮತ್ತು ಉನ್ನತ ಶಿಕ್ಷಣ ಎಂಬ ಎರಡು ಪ್ರಭೇದಗಳಿವೆ. ಭಾರತದಲ್ಲಿ ಮೂಲಶಿಕ್ಷಣ ಕಡ್ಡಾಯವಾಗಿದೆ.

**ಅನೌಪಚಾರಿಕ ಶಿಕ್ಷಣ:** ಅನೌಪಚಾರಿಕ ಶಿಕ್ಷಣ ವಿಧಾನದಲ್ಲಿ ಶಿಕ್ಷಣವನ್ನು ಶಾಲಾಕಾಲೇಜುಗಳಲ್ಲಿ ನೀಡಲಾಗುವುದಿಲ್ಲ ಹಾಗೂ ಇದು ಕ್ರಮಬದ್ಧವಾಗಿರುವುದಿಲ್ಲ. ಅನೌಪಚಾರಿಕ ಶಿಕ್ಷಣದ ಮೂಲ ಗುರಿ ಜನರನ್ನು ಅಕ್ಷರಸ್ಥರನ್ನಾಗಿ ಮಾಡುವುದಾಗಿದೆ. ಭಾರತದಲ್ಲಿ ವಯಸ್ಕರ ಶಿಕ್ಷಣ, ಸಾಕ್ಷರತಾ ಆಂದೋಲನಗಳು ವಿವಿಧ ರೀತಿಯ ಅಲ್ಪಕಾಲಿಕ ತರಬೇತಿ ಶಿಬಿರಗಳು ಮುಂತಾದವು ಅನೌಪಚಾರಿಕ ಶಿಕ್ಷಣಕ್ಕೆ ಪ್ರಮುಖ ಉದಾಹರಣೆಗಳಾಗಿವೆ (ಎಚ್ಚಾರ್ಕೆ, ೨೦೦೬).

**ಪ್ರಾಸಂಗಿಕ ಶಿಕ್ಷಣ:** ಪ್ರಾಸಂಗಿಕ ಶಿಕ್ಷಣದಲ್ಲಿ ಉದ್ದೇಶಪೂರ್ವಕ ಯೋಜನೆ ಇರುವುದಿಲ್ಲ. ಕಲಿಕೆ ಆಕಸ್ಮಿಕವಾಗಿರುತ್ತದೆ. ಉದಾಹರಣೆಗೆ ತಂದೆ–ತಾಯಿಗಳು ತಮ್ಮ ಮಕ್ಕಳಿಗೆ ನೀಡುವ ಉಪದೇಶ, ರೈತ ಮುಖಂಡರು ರೈತ ಸಮುದಾಯಕ್ಕಗಿ ಮಾಡುವ ಭಾಷಣ, ಕರಪತ್ರ ಮುಂತಾದವುಗಳ ಮೂಲಕ ನೀಡುವ ತಿಳುವಳಿಕೆ, ಕಮ್ಮಾರ, ಕುಂಬಾರ, ಚಮ್ಮಾರ, ಮೀನುಗಾರ ಮುಂತಾದವರು ತಮ್ಮ ಸಂತಾನಕ್ಕೆ ನೀಡುವ ವೃತ್ತಿ ತಿಳುವಳಿಕೆ ಇತ್ಯಾದಿ ಪ್ರಾಸಂಗಿಕ ಶಿಕ್ಷಣವಾಗಿದೆ.

## ೧.೬ ಅಧ್ಯಯನದ ಗುರಿ, ಉದ್ದೇಶ ಮತ್ತು ವ್ಯಾಪ್ತಿ

### ೧.೬.೧ ಅಧ್ಯಯನದ ಗುರಿ

ದಕ್ಷಿಣ ಕನ್ನಡ ಜಿಲ್ಲೆಯ ಕಾಲೇಜು ಶಿಕ್ಷಣದ ಮಹಿಳಾ ಅಧ್ಯಾಪಿಕೆಯರು ಮತ್ತು ಅಭಿವೃದ್ಧಿ ಬಗೆಗಿನ ಒಂದು ಅಧ್ಯಯನದ ಮೂಲಕ ಆದರ ಸಿಬ್ಬಂದಿಗಳ ರಚನೆ, ಆಂತರಿಕ ಸಂಬಂಧ, ನಿರ್ವಹಣೆ ಮತ್ತು ಸಂಸ್ಥೆಯ ವೈಯಕ್ತಿಕ ಸಮಸ್ಯೆಗಳ ಬಗ್ಗೆ ತಿಳಿದುಕೊಳ್ಳುವುದು ಅಧ್ಯಯನದ ಗುರಿಯಾಗಿದೆ. ಸಿಬ್ಬಂದಿ ರಚನೆಯ ಲೋಪಗಳು, ನೇಮಕಾತಿ ವಿಧಾನಗಳ ಬಗ್ಗೆ ಕಂಡುಹಿಡಿಯುವುದು ಇದರ ಉದ್ದೇಶವಾಗಿದೆ. ಆಧುನಿಕ ನಿರ್ವಹಣಾ ತಂತ್ರದಲ್ಲಿ ಸಿಬ್ಬಂದಿಗಳ ಪ್ರತಿಭೆ, ಉತ್ಸಾಹ, ಕೆಲಸದ ವಾತಾವರಣ ಮತ್ತು ಸಾಮರ್ಥ್ಯದ ಹೆಚ್ಚಳ ಮುಂತಾದವುಗಳ ಬಗ್ಗೆ ತಿಳಿಯುವುದು ಅಧ್ಯಯನದ ಗುರಿಯಾಗಿದೆ.

### ೧.೬.೨ ಅಧ್ಯಯನದ ಉದ್ದೇಶ

1. ದಕ್ಷಿಣ ಕನ್ನಡ ಜಿಲ್ಲೆಯ ಕಾಲೇಜು ಶಿಕ್ಷಣದ ಅಧ್ಯಾಪನಾ ವೃತ್ತಿಯಲ್ಲಿ ಸಿಬ್ಬಂದಿ ಮಾದರಿಯ ಅಸ್ತಿತ್ವ ಮತ್ತು ಪ್ರಚಲಿತ ನೇಮಕಾತಿ ವಿಧಾನಗಳ ಬಗ್ಗೆ ತಪಾಸಣೆ ನಡೆಸುವುದು.
2. ಸಿಬ್ಬಂದಿಗಳ ಕೆಲಸದ ವಾತಾವರಣಕ್ಕನುಗುಣವಾಗಿ ಅವರ ಸಾಮರ್ಥ್ಯವನ್ನು ನಿರ್ಧರಿಸುವುದು.
3. ಸಿಬ್ಬಂದಿಗಳ ಭಡ್ತಿಯ ವಿಧಾನಗಳನ್ನು ವಿಮರ್ಶಾತ್ಮಕವಾಗಿ ಪರಿಶೀಲಿಸುವುದು.
4. ಸಿಬ್ಬಂದಿಗಳ ಪ್ರೋತ್ಸಾಹಧನ ಮತ್ತು ವೇತನ ಮಟ್ಟದ ವಿಸ್ತರಣೆಯ ಬಗ್ಗೆ ತಿಳಿಯುವುದು.
5. ಇಲಾಖೆಯು ಸಿಬ್ಬಂದಿಗಳ ವ್ಯಕ್ತಿಯ ಏಳಿಗೆ ಬಗ್ಗೆ ಕಾರ್ಯಕ್ರಮ ಸಿಬ್ಬಂದಿ ತರಬೇತಿ ಕಾರ್ಯಕ್ರಮಗಳ ಬಗ್ಗೆ ಪರಿಶೀಲನೆ ನಡೆಸುತ್ತದೆಯೇ ಎಂಬುದನ್ನು ಕಂಡುಹಿಡಿಯುವುದು.
6. ವೃತ್ತಿಗೆ ಸರಿಯಾದ ಸ್ಥಳಾವಕಾಶ, ಸರಿಯಾದ ಮಾಹಿತಿ ಜ್ಞಾನ ಮತ್ತು ಬೇರೆ ಬೇರೆ ರೀತಿಯ ಕೌಶಲ್ಯಗಳನ್ನು ಒದಗಿಸಿಕೊಟ್ಟ ಬಗ್ಗೆ ತಿಳಿಯುವುದು.
7. ಕರ್ನಾಟಕ ರಾಜ್ಯದ ಕಾಲೇಜುಗಳಿಗಿರುವ ಪ್ರಸಕ್ತ ಯೋಜನೆ ಮತ್ತು ನೇಮಕಾತಿ ನಿಯಮಗಳು ಮುಂತಾದವುಗಳ ಬಗ್ಗೆ ಸರಿಯಾದ ಮಾಹಿತಿಯನ್ನು ಪಡೆಯುವುದು.

### ೧.೬.೩ ಅಧ್ಯಯನದ ವ್ಯಾಪ್ತಿ

ಕಾಲೇಜಿನ ಪ್ರಸ್ತುತ ಸಿಬ್ಬಂದಿಗಳ ಸಾಮರ್ಥ್ಯ, ನಿರೀಕ್ಷೆ ಮತ್ತು ಯೋಜನೆಗಳಿಗೆ ತಕ್ಕಂತೆ ಅವರ ವೃತ್ತಿಗನುಗುಣವಾಗಿ ಯಾವ ರೀತಿಯ ಸೇವಾಮನೋಭಾವವನ್ನು ನಿರ್ಧರಿಸಬಹುದು ಎಂಬುದನ್ನು ಅರ್ಥಮಾಡಿಕೊಳ್ಳುವುದು ಇದರ ಗುರಿಯಾಗಿದೆ. ಸಿಬ್ಬಂದಿಗಳ ನೇಮಕಾತಿ, ದುಡಿಯುವ ವಾತಾವರಣ, ಕೆಲಸದ ಹಂಚಿಕೆ, ಕೆಲಸದ ಹುಮ್ಮಸ್ಸು ಮತ್ತು ಆಂತರಿಕ ಸಂಬಂಧಗಳ ಪರಿಶೀಲನೆ ನಡೆಸುವುದಾಗಿದೆ. ವಿದ್ಯಾರ್ಥಿಗಳ ಸರ್ವಾಂಗೀಣ ಅಭಿವೃದ್ಧಿಗೆ ಯಾವ ರೀತಿ ಸಹಾಯ ನೀಡುತ್ತಾರೆ ಎಂಬುವುದನ್ನು ತಿಳಿಯುವುದು. ಪಾಲಕರೊಂದಿಗೆ ಶಿಕ್ಷಕರ ಆತ್ಮೀಯ, ಸಹಕಾರಯುತ ಸಂಬಂಧಗಳ ಬಗ್ಗೆ ತಿಳಿಯುವುದು. ಅನ್ಯಾಯ, ಶೋಷಣೆ, ತೇಜೋವಧೆಗಳಿಂದ ಶಿಕ್ಷಕ ಯಾವ ರೀತಿ ತನ್ನನ್ನು ತಾನು ದಕ್ಷಿಸಿಕೊಳ್ಳುತ್ತಾನೆ, ಸೇವಾವಧಿ ಶಿಕ್ಷಣ, ವಿಚಾರ ಸಂಕಿರಣ, ಕಾರ್ಯಾಗಾರ, ಸಭೆ–ಸಮಾರಂಭಗಳಲ್ಲಿ ಪಾಲ್ಗೊಳ್ಳುವಿಕೆ, ಸಹೋದ್ಯೋಗಿಗಳೊಂದಿಗೆ ವರ್ತನೆ, ಸಂಸ್ಥೆಯ ಮುಖ್ಯಸ್ಥರು ಹಾಗೂ ಸಹೋದ್ಯೋಗಿಗಳೊಂದಿಗೆ ಸಹಕಾರ, ವೃತ್ತಿ ನೀತಿ ಸಂಹಿತೆ ಹಾಗೂ ಶಿಸ್ತು ಪಾಲನೆ ಮಾಡುವುದು ಮುಂತಾದವುಗಳನ್ನು ತಿಳಿದುಕೊಳ್ಳುವುದಾಗಿದೆ.

ಭಾರತದ ಶೈಕ್ಷಣಿಕ ಸನ್ನಿವೇಶದಲ್ಲಿ ಅನೇಕ ತತ್ವಹೀನ ಆಡಳಿತ ವ್ಯವಸ್ಥೆಗಳಿಂದ ಶಿಕ್ಷಕರು ಕಿರುಕುಳ, ಶೋಷಣೆ, ತೇಜೋವಧೆ ಅನುಭವಿಸುತ್ತಿದ್ದಾರೆ. ಹಲವು ಬಾರಿ ಶಿಕ್ಷಣ ವ್ಯವಸ್ಥೆಯ ಸರ್ವ ದೋಷಗಳಿಗೂ ಶಿಕ್ಷಕರನ್ನೇ ಬಲಿಪಶು ಮಾಡಲಾಗುತ್ತಿದೆ. ವೃತ್ತಿ ಸಂಹಿತೆಯ ಯಶಸ್ವಿ ಆಚರಣೆ ಕೇವಲ ಶಿಕ್ಷಣ ಸಮೂಹದ ನಿರ್ಧಾರ ಮಾತ್ರದಿಂದ ಸಾಧ್ಯವಿಲ್ಲ. ಕಾಲೇಜು ವ್ಯವಸ್ಥಾಪಕ ಮಂಡಳಿಗಳು ಹಾಗೂ ಸರಕಾರಿ ಆಡಳಿತ ಇಲಾಖೆಗಳಿಗೆ ಶಿಕ್ಷಕ ವೃತ್ತಿ ಸಂಹಿತೆಯ ಯಶಸ್ವಿ ಆಚರಣೆಗೆ ಶಿಕ್ಷಕ ಸಮೂಹದಷ್ಟೇ ಸರಿಸಮಾನವಾದ ಕೆಲವು ಬಾಧ್ಯತೆಗಳನ್ನು ನಿಭಾಯಿಸುವುದು ಅವಶ್ಯ. ಕಾಲೇಜು ವ್ಯವಸ್ಥಾಪಕ ಮಂಡಳಿಗಳು ಹಾಗೂ ಆಡಳಿತ ವರ್ಗ ಶಿಕ್ಷಕ ವೃತ್ತಿ ನೀತಿ ಸಂಹಿತೆಗೆ ಸಾದೃಶ್ಯವಾದ ತಮ್ಮದೇ ಆದ ನೀತಿಸಂಹಿತೆಗಳನ್ನು ರೂಪಿಸಲು ನಿರ್ಧರಿಸಬೇಕು. ಇದು ವೃತ್ತಿ, ನೀತಿಸಂಹಿತೆ ವಿಫಲಗೊಳ್ಳುವುದನ್ನು ತಪ್ಪಿಸುತ್ತದೆ. ಪ್ರಸ್ತುತ ಸಂಹಿತೆಯ ಅಂತಿಮ ಭಾಗವು ಶೈಕ್ಷಣಿಕ ವ್ಯವಸ್ಥೆ ಹಾಗೂ ಆಡಳಿತಗಳೊಂದಿಗೆ ಶಿಕ್ಷಕನ ಸಂಬಂಧಗಳನ್ನು ವಿಸ್ತೃತವಾಗಿ ನಿರೂಪಿಸಿದೆ. ಶಿಕ್ಷಕರು ನೀತಿ ಸಂಹಿತೆಗಳನ್ನು ಪ್ರಜ್ಞಾಪೂರ್ವಕವಾಗಿ ಆಚರಿಸಬೇಕು. ವೃತ್ತಿಯ ಔನ್ನತ್ಯಕ್ಕಾಗಿ ನಿರಂತರ ಶ್ರಮಿಸಬೇಕು. ವೃತ್ತಿ ಅಂತಸ್ತಿನ ಕೆಳಮಟ್ಟಕ್ಕೆ ಕಾರಣ ವೃತ್ತಿಗಾರನೇ ಆಗಿದ್ದಾನೆ.

### ೧.೬.೪ ಅಧ್ಯಯನದ ಮಿತಿ

ಇತ್ತೀಚಿನ ದಿನಗಳಲ್ಲಿ ದಕ್ಷಿಣಕನ್ನಡ ಜಿಲ್ಲೆಯಲ್ಲಿ ಅನೇಕ ಕಾಲೇಜುಗಳು ತಲೆಯೆತ್ತಿವೆ. ಆದರೆ ಪ್ರಸ್ತುತ ಅಧ್ಯಯನದಲ್ಲಿ ಕೆಲವು ಕಾಲೇಜುಗಳನ್ನು ಮಾತ್ರ ತೆಗೆದುಕೊಳ್ಳಲಾಗಿದೆ. ಅಧ್ಯಯನವು ಕಾಲೇಜು ಶಿಕ್ಷಣದ ಅಧ್ಯಾಪನಾ ವೃತ್ತಿಯ ಸಿಬ್ಬಂದಿಗಳ ಅಭಿಪ್ರಾಯವನ್ನು ಒಳಗೊಂಡಿದೆ. ಇದು ವಿವಿಧ ಭಿನ್ನಾಭಿಪ್ರಾಯಗಳನ್ನು ಒಳಗೊಂಡಿದ್ದು ವ್ಯಾವಹಾರಿಕ ಕೊರತೆಯನ್ನು ಒಳಗೊಂಡಿರುತ್ತದೆ.

ಇಲ್ಲಿ ಉತ್ತರ ಕೊಟ್ಟ ವ್ಯಕ್ತಿ ತನ್ನ ಬುದ್ಧಿವಂತಿಕೆ ಹಾಗೂ ಸನ್ನಿವೇಶಕ್ಕೆ ತಕ್ಕಂತೆ ಭಾವನೆಗಳನ್ನು ಬದಲಾಯಿಸಬಹುದು ಮತ್ತು ಕೆಲವರು ತಮ್ಮ ಅನುಭವ ಹಾಗೂ ಭಾವನೆಗಳನ್ನು ಇನ್ನೊಂದು ರೀತಿಯಾಗಿ ವ್ಯಕ್ತಪಡಿಸಿರಬಹುದು. ಇದು ಅಧ್ಯಯನದ ಮುಖ್ಯ ಮಿತಿಯಾಗಿದೆ.

## ೧.೭ ಪ್ರಮೇಯಗಳು

1. ಇಲಾಖೆಯ ಹೆಚ್ಚಿನ ಸಿಬ್ಬಂದಿಗಳಿಗೆ ಭಡ್ತಿ ಮತ್ತು ನೇಮಕಾತಿ ಪ್ರಕ್ರಿಯೆಯಲ್ಲಿ ಸಂತೋಷವಿಲ್ಲ.
2. ಇಲಾಖೆಯ ಪ್ರಸ್ತುತ ಸಿಬ್ಬಂದಿಗಳಲ್ಲಿ ಹೊಂದಾಣಿಕೆಯ ಅವಶ್ಯಕತೆ ಇದೆ.
3. ಹೆಚ್ಚಿನ ಕಾಲೇಜುಗಳಲ್ಲಿ ಸಿಬ್ಬಂದಿಗಳ ಕೊರತೆ ಎದ್ದು ಕಾಣುತ್ತದೆ.

4. ಕಾಲೇಜುಗಳಲ್ಲಿ ಉತ್ತಮ ಸ್ವ-ಸ್ಪರ್ಧಾತ್ಮಕತೆ ಕಾಣುತ್ತಿಲ್ಲ.
5. ಇಲಾಖೆಯು ಶಿಕ್ಷಕರಿಗೆ ಉತ್ತಮ ತರಬೇತಿ ನೀಡುವಲ್ಲಿ ಹಿಂದೆ ಬಿದ್ದಿದೆ.
6. ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳಲ್ಲಿ ಅಸಮರ್ಥತೆ ಮತ್ತು ಸಮನ್ವಯದ ಕೊರತೆ ಇದೆ.
7. ಇಲಾಖೆಯಲ್ಲಿ ಉತ್ತಮ ಯೋಗಕ್ಷೇಮ, ಪ್ರೋತ್ಸಾಹ, ಉತ್ತೇಜನದ ಮೂಲಕ ಕೆಲಸದ ಸಾಮರ್ಥ್ಯದ ಹೆಚ್ಚಳ ಮತ್ತು ಒಳ್ಳೆಯ ಪರಿಣಾಮಕಾರಿ ವಾತಾವರಣವನ್ನು ಒದಗಿಸಲಾಗಿಲ್ಲ.

## ೧.೮ ದತ್ತಾಂಶಗಳ ಸಂಗ್ರಹಣಾ ವಿಧಾನ

1. ಪ್ರಶ್ನಾವಳಿ ವಿಧಾನ
2. ಸಂದರ್ಶನ ವಿಧಾನ
3. ಅವಲೋಕನ ವಿಧಾನ

### ೧.೮.೧ ಪ್ರಶ್ನಾವಳಿ ವಿಧಾನ

ಪ್ರಸ್ತುತ ಸಮೀಕ್ಷೆಯಲ್ಲಿ ಪ್ರಶ್ನಾವಳಿಗಳ ವಿಸ್ತಾರವಾದ ದತ್ತಾಂಶಗಳ ಸಂಗ್ರಹಣಾ ವಿಧಾನವನ್ನು ಅಳವಡಿಸಲಾಗಿದೆ. ಪ್ರಶ್ನಾವಳಿಯಲ್ಲಿ ಮಾಹಿತಿದಾರರು ಉತ್ತರ/ಪ್ರತಿಕ್ರಿಯೆ ನೀಡಲು ವಿಭಿನ್ನ ಆಯ್ಕೆಯ ಪ್ರಶ್ನೆಗಳನ್ನು ಮಾಡಿ ಹಂಚಲಾಗಿದೆ. ಪ್ರಶ್ನಾವಳಿಯನ್ನು ವಿವಿಧ ಕಾಲೇಜಿನ ಶಿಕ್ಷಕರು, ಶಿಕ್ಷಕಿಯರು ಮತ್ತು ಮುಖ್ಯೋಪಾಧ್ಯಾಯರಿಗೆ ನೀಡಲಾಗಿದೆ. ಪ್ರಶ್ನಾವಳಿಯನ್ನು ಕೋಷ್ಟಕ ಪಟ್ಟಿ ಮತ್ತು ವರ್ಗೀಕರಣ ವಿಶ್ಲೇಷಣೆಯ ಮೂಲಕ ತೋರಿಸಲಾಗಿದೆ. 100 ಪ್ರಶ್ನಾವಳಿಗಳನ್ನು ಕಾಲೇಜಿನ ಸಿಬ್ಬಂದಿಗಳಿಗೆ ಹಂಚಲಾಗಿದೆ. ಆದರಲ್ಲಿ 78 ಪ್ರಶ್ನಾವಳಿಗಳಿಗೆ ಮಾತ್ರ ಪ್ರತ್ಯುತ್ತರ ಬಂದಿದೆ. ಪ್ರತ್ಯುತ್ತರ ನೀಡಿದ ಬಗೆಗಿನ ಮಾಹಿತಿಯನ್ನು ಕೋಷ್ಟಕದಲ್ಲಿ ಮತ್ತು ಕೆಲವು ನಕ್ಷೆಗಳನ್ನು ಸೂಕ್ತ ರೀತಿಯಲ್ಲಿ ತೋರಿಸಲಾಗಿದೆ.

### ೧.೮.೨ ಸಂದರ್ಶನ ವಿಧಾನ

ದತ್ತಾಂಶ ಸಂಗ್ರಹಣೆಯಲ್ಲಿ ಸಂದರ್ಶನವು ಶ್ರೇಷ್ಠವಾದ ವಿಧಾನವೆಂದು ಪರಿಗಣಿಸಲಾಗಿದೆ.. ಸಂದರ್ಶನ ವಿಧಾನವು ಸಂಶೋಧಕ ಮತ್ತು ಮಾಹಿತಿಗಾರರಲ್ಲಿ ಪ್ರಾಮಾಣಿಕ ಸಂವಹನವನ್ನು ಒದಗಿಸಿದೆ. ಅಧ್ಯಯನದಲ್ಲಿ ಹೆಚ್ಚಿನ ಮಾಹಿತಿಗಾರರನ್ನು ಅವರವರ ಕಾಲೇಜಿನಲ್ಲೇ ಸಂದರ್ಶಿಸಲಾಗಿದೆ. ಸಂದರ್ಶನದ ಸಮಯದಲ್ಲಿ ಹೆಚ್ಚಿನವರು ನೇರ ಮತ್ತು ಮುಕ್ತ ಮನಸ್ಸಿನಿಂದ ತಮ್ಮ ಅನಿಸಿಕೆಗಳನ್ನು ವ್ಯಕ್ತಪಡಿಸಿದ್ದಾರೆ.

## ೧.೮.೩ ಅವಲೋಕನ ವಿಧಾನ

ಸಂಶೋಧನೆಗೆ ಅವಲೋಕನದಿಂದಾಗಿ ನೇರವಾಗಿ ದತ್ತಾಂಶ ಸಂಗ್ರಹಿಸಲು ಸಾಧ್ಯವಾಯಿತು. ಈ ವಿಧಾನವು ಪ್ರಾಮಾಣಿಕ ದತ್ತಾಂಶವನ್ನು ಒದಗಿಸುತ್ತದೆ. ಮಾಹಿತಿ ಸಂಗ್ರಹದಲ್ಲಿ ನೇರವಾಗಿ ನಗರ ಮತ್ತು ಗ್ರಾಮೀಣ ಪ್ರದೇಶಗಳಿಗೆ ಭೇಟಿಕೊಟ್ಟು ಮಾಹಿತಿ ಸಂಗ್ರಹಿಸಲಾಗಿದೆ. ಅವಲೋಕನ ವಿಧಾನದಲ್ಲಿ ಸಂಶೋಧಕರು ತಮ್ಮ ಸ್ವಶಕ್ತಿಯನ್ನು ಉಪಯೋಗಿಸಿಕೊಂಡು ಮಾಹಿತಿ ಸಂಗ್ರಹ ಮಾಡಲು ಸಾಧ್ಯವಾಗಿದೆ.

*****

**ಉಲ್ಲೇಖಗಳು:**


1. ರಘು ಕೆ. (1998) 'ಭಾರತದಲ್ಲಿ ಶಿಕ್ಷಣ ಮತ್ತು ಸಮಾಜ'. ಶಾರದ ಮುದ್ರಣ, ಗಾರ್ಡನ್ ರಸ್ತೆ, ಮೈಸೂರು.
2. ನಾಗರಾಜ್ ಡಿ.ಕೆ. (1997). 'ಶೈಕ್ಷಣಿಕ ಸಂಶೋಧನೆ' ಶ್ರೀ ರಾಮ ಪ್ರಿಂಟರ್ಸ್, ಬೆಂಗಳೂರು.
3. ಪ್ರಭಾಕರ ಶಿಶಿಲ (2002). 'ಆರ್ಥಿಕ ಅಭಿವೃದ್ಧಿಯ ವಿಜ್ಞಾನ'. ಮಂಗಳ ಪ್ರಕಾಶನ, ಮಂಗಳೂರು.
4. ಜ್ಯೋತಿ (2007). 'ಮಹಿಳಾ ಸಾಮಾಜಿಕತೆ'. ವೆಂಕಟೇಶ್ವರ ಪ್ರೆಸ್, ಬೆಂಗಳೂರು.
5. ಹೆಚ್ಚಾರ್ಕೆ (2006). 'ಭಾರತದ ಆರ್ಥಿಕ ವ್ಯವಸ್ಥೆ'. ಸ್ವಪ್ನ ಬುಕ್ ಹೌಸ್, ಬೆಂಗಳೂರು.
6. ಹೆರಾಲ್ಡ್ ಜೆ. (1986). 'ಶಿಕ್ಷಣ ಅಂದು ಇಂದು ಮುಂದು' ಕಾಂಪ್ಟನ್ಸ್ ಮುದ್ರಣ, ನ್ಯೂಯಾರ್ಕ್.
7. ಭಾಟಿಯಾ ಕೆ.ಕೆ. (1974). 'ಶಿಕ್ಷಣದ ತತ್ತ್ವಗಳು ಮತ್ತು ತಂತ್ರಗಳು', ಲೂಧಿಯಾನ ಪ್ರಕಾಶಕರು.
8. ಮೊಹಂತಿ ಜೆ. (1982). 'ಇಂಡಿಯನ್ ಎಜ್ಯುಕೇಶನ್ ಇನ್ ದ ಎಮರ್ಜಿಂಗ್ ಸೊಸೈಟಿ', ನ್ಯೂಡೆಲ್ಲಿ.
9. ಪಲಿವಾಲ್ ಎಂ.ಆರ್. (1984). 'ಶಿಕ್ಷಣ ಮತ್ತು ಸಾಮಾಜಿಕ ಬದಲಾವಣೆ, ನ್ಯೂಡೆಲ್ಲಿ.
10. ಮುಜಾಮಿಲ್ ಜಾನ್ (2008). 'ಇಂಪಾಕ್ಟ್ ಆಫ್ ಎಜ್ಯುಕೇಶನ್ ಆನ್ ಡಿಸಿಸನ್ ಮೇಕಿಂಗ್ ಪವರ್ ಅಮಂಗ್ ವುಮೆನ್'. ಜರ್ನಲ್ ಆಫ್ ಎಜ್ಯುಕೇಶನ್ ಪ್ಲಾನಿಂಗ್ ಎಂಡ್ ಅಡ್ಮಿನಿಸ್ಟ್ರೇಶನ್, 22(3):273-282.
11. ಶಿಂಧೆ ಜಗನ್ನಾಥ್ ಆರ್. ಮತ್ತು ವಿ. ರಾಮಕೃಷ್ಣ (2008). 'ಶೆಡ್ಯೂಲ್ಡ್ ಕಾಸ್ಟ್ ವಿಮೆನ್ ಇನ್ ಹೈಯರ್ ಎಜ್ಯುಕೇಶನ್ ಆಂಡ್ ಪಾಲಿಸೀಸ್: ಎ ಸ್ಟಡಿ ಆಫ್ ಕರ್ನಾಟಕ', ದಿ ಜರ್ನಲ್ ಆಫ್ ವರ್ಲ್ಡ್ ಇನ್‌ಟೆಲೆಕ್ಚುವಲ್ ಪ್ರಾಪರ್ಟಿ ರೈಟ್ಸ್, 4(1-2): 259-272.
12. ಹರೀಶ್ ಎನ್., ಜಯಶೀಲ ಮತ್ತು ವಿ. ಬಾಸಿಲ್ ಹನ್ಸ್ (2007). 'ಪ್ರೈಮರಿ ಎಜ್ಯುಕೇಶನ ಆಂಡ್ ಇನ್‌ಫ್ರಾಸ್ಟ್ರಕ್ಚರ್ ಇನ್ ಇಂಡಿಯಾ: ಪ್ರೊಗ್ರೆಸ್ ಆಂಡ್ ಪ್ರಾಬ್ಲಮ್ಸ್', ದಿ ಜರ್ನಲ್ ಆಫ್ ವರ್ಲ್ಡ್ ಇನ್‌ಟೆಲೆಕ್ಚುವಲ್ ಪ್ರಾಪರ್ಟಿ ರೈಟ್ಸ್, 3(1-2): 191-204.

# ಅಧ್ಯಾಯ - ೨

## ಮಹಿಳೆ ಮತ್ತು ಶಿಕ್ಷಣ: ಪರಿಕ್ರಮಗಳು, ಪ್ರಕ್ರಿಯೆ ಮತ್ತು ಪಾಲುದಾರಿಕೆ

೨.೧ ಪ್ರಾಚೀನ ಕಾಲದಲ್ಲಿ ಸ್ತ್ರೀ ಶಿಕ್ಷಣ

೨.೨ ಮಹಿಳಾ ಶಿಕ್ಷಣ ಮತ್ತು ಅಭಿವೃದ್ಧಿ

೨.೩ ಮಹಿಳಾ ಶಿಕ್ಷಣವನ್ನು ಉತ್ತೇಜಿಸಲು ಕ್ರಮಗಳು

೨.೪ ಮಹಿಳಾ ಶಿಕ್ಷಣ ಹಿಂದುಳಿದಿರುವುದಕ್ಕೆ ಕಾರಣಗಳು

೨.೫ ಭಾರತದಲ್ಲಿ ಮಹಿಳಾ ಶಿಕ್ಷಣ

೨.೬ ಕರ್ನಾಟಕದಲ್ಲಿ ಸ್ತ್ರೀ ಶಿಕ್ಷಣ ಅಂದು-ಇಂದು

೨.೭ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶಿಕ್ಷಣಕ್ಕೆ ಮಹಿಳೆಯರ ಕೊಡುಗೆ

# ಅಧ್ಯಾಯ – ೨

## ಮಹಿಳೆ ಮತ್ತು ಶಿಕ್ಷಣ: ಪರಿಕ್ರಮಗಳು, ಪ್ರಕ್ರಿಯೆ ಮತ್ತು ಪಾಲುದಾರಿಕೆ

ಶಿಕ್ಷಣವು ಮನುಷ್ಯನ ಬುದ್ಧಿ ಮತ್ತು ವ್ಯಕ್ತಿತ್ವದ ವಿಕಸನಕ್ಕೆ ಒದಗುವ ಸಾಧನವಾಗಿವೆ. ಅರಿವನ್ನು ವಿಸ್ತರಿಸಿಕೊಳ್ಳುವುದು ಮತ್ತು ಜೀವನದ ಮುಂದುವರಿಕೆಗಾಗಿ ಅವಶ್ಯಕವಿರುವ ಕೌಶಲ್ಯಗಳನ್ನು ತಿಳಿದು ಕೊಳ್ಳುವುದು ಶಿಕ್ಷಣದ ಮುಖ್ಯ ಗುರಿಗಳಾಗಿವೆ. ಆದ್ದರಿಂದ ಸಮಾಜದ ಅಭಿವೃದ್ಧಿ ಪಥದಲ್ಲಿ ಜೀವನ ನಿರ್ವಹಣಾ ತರಬೇತಿಯಾಗಿ ಶಿಕ್ಷಣಕ್ಕೆ ಪ್ರಾಮುಖ್ಯತೆ ಇದೆ.

ಶಿಕ್ಷಣದಿಂದ ವಂಚಿತಗೊಳಿಸುವುದೆಂದರೆ ಬದುಕುವ ಹಕ್ಕನ್ನು ಕಸಿದುಕೊಂಡಂತೆ. ಜೀವನೋಪಾಯಕ್ಕೆ ತಡೆ ಒದಗಿಸಿದಂತೆ, ಶತಮಾನಗಳಿಂದ ಧರ್ಮ, ರೂಢಿ ಮತ್ತು ಸಂಪ್ರದಾಯಗಳು, ಜ್ಞಾನದ ಅರಿವು ಮಹಿಳೆಯರಿಗೆ ಹೇಳಿದ್ದಲ್ಲವೆಂದು ಪ್ರಚಾರ ಮಾಡುತ್ತಾ ಬಂದಿದೆ. ಇದರ ಪರಿಣಾಮವಾಗಿ ಆಸಕ್ತಿ, ಚಟುವಟಿಕೆ ಮತ್ತು ಸಾಧನೆಗಳ ವಿಚಾರವಾಗಿ ಸ್ತ್ರೀ ಪುರುಷರ ನಡುವೆ ಅಗಾಧ ವ್ಯತ್ಯಾಸಗಳು ಮೂಡಿಬಂದಿವೆ. ಇಂದು ಹೆಣ್ಣು ಎರಡನೆಯ ದರ್ಜೆಯವಳಾಗಿ ಗುರುತಿಸಿಕೊಳ್ಳುವುದಕ್ಕೆ ಶಿಕ್ಷಣದ ಕೊರತೆಯೇ ಕಾರಣವೆಂದು ಎಲ್ಲಾ ಸಮಾಜಗಳು ಒಪ್ಪಿಕೊಂಡಿವೆ. ಪ್ರತಿಯೊಬ್ಬರಿಗೂ ಸಮಾನ ಶಿಕ್ಷಣ ನೀಡುವುದರ ಮೂಲಕ ಸಮಾಜದ ಲಿಂಗಭೇದ ನೀತಿಯನ್ನು ಹೋಗಲಾಡಿಸುವುದು ಸಾಧ್ಯವೆಂದು ಮಹಿಳಾ ವಿಮೋಚನಾಕಾರರು ತಿಳಿಯುತ್ತಾರೆ.

ಮಹಿಳೆಯರಿಗೆ ನೀಡುವ ಶಿಕ್ಷಣದ ಕುರಿತು ಪ್ರಮುಖವಾಗಿ ಎರಡು ವಾದಗಳು ಅಸ್ತಿತ್ವದಲ್ಲಿ ಇದೆ. ಮಹಿಳೆಯರಿಗೆ ನೀಡುವ ಕುಟುಂಬ ಮತ್ತು ಸಮಾಜದ ಸ್ವಾಸ್ಥ್ಯವನ್ನು ಕಾಪಾಡುವ ರೀತಿಯಲ್ಲಿ ಇರಬೇಕು ಎಂದು ಮೊದಲನೆಯ ವಾದ ತಿಳಿಸಿದರೆ, ಶಿಕ್ಷಣವು ಮಹಿಳೆಯ ವ್ಯಕ್ತಿತ್ವ ವಿಕಸನಕ್ಕೆ ಅನುವು ಮಾಡಿಕೊಡುವಂತಿರಬೇಕು ಎಂದು ಎರಡನೆಯ ವಾದ ತಿಳಿಸುತ್ತದೆ. ಈ ಎರಡು ವಾದಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ಪ್ರಾಚೀನ ಕಾಲದಿಂದ ಆಧುನಿಕ ಕಾಲದವರೆಗೆ ಭಾರತದಲ್ಲಿ ಮಹಿಳಾ ಶಿಕ್ಷಣದ ಪರಿಕ್ರಮಗಳು ನಡೆದು ಬಂದ ದಾರಿಯನ್ನು ಅವಲೋಕಿಸಿದಾಗ ಅನೇಕ ಮಹತ್ವದ ಅಂಶಗಳು ನಮ್ಮ ಗಮನವನ್ನು ಸೆಳೆಯುತ್ತವೆ. ಇವುಗಳಲ್ಲಿ ಶಿಕ್ಷಣ ಮತ್ತು ಮಹಿಳೆಯರ ಅಭಿವೃದ್ಧಿ ಕುರಿತಂತೆ ಮುಖ್ಯವಾದ ಪರಿಕ್ರಮಗಳು, ಪ್ರಕ್ರಿಯೆ ಮತ್ತು ಪಾಲುದಾರಿಕೆಯ ಮಜಲುಗಳ ಮೇಲೆ ಬೆಳಕು ಚೆಲ್ಲುವ ಪ್ರಯತ್ನ ಈ ಅಧ್ಯಾಯ.

## ೨.೧ ಪ್ರಾಚೀನ ಕಾಲದ ಸ್ತ್ರೀ ಶಿಕ್ಷಣ

ಆಧುನಿಕ ಭಾರತವನ್ನು ಹೋಲಿಸಿದರೆ ಪ್ರಾಚೀನ ಭಾರತದಲ್ಲಿ ಮಹಿಳೆಯರಿಗೆ ಶಿಕ್ಷಣ ಹಾಗೂ ಉದ್ಯೋಗ ಕ್ಷೇತ್ರದಲ್ಲಿ ಸಾಕಷ್ಟು ಅನುಕೂಲಗಳಿದ್ದವು ಎಂದು ಇತಿಹಾಸ ತಜ್ಞೆ ಜೋತ್ಸ್ನಾ ಕಾಮತ್ ತಿಳಿಸುತ್ತಾರೆ. ಅವರು ಹೇಳುವ ಪ್ರಕಾರ ವೇದಕಾಲದಲ್ಲಿ ಆಧ್ಯಾತ್ಮಿಕ ವಿಚಾರಗಳಲ್ಲಿ ಆಸಕ್ತಿ ಹೊಂದಿದವರು ಬ್ರಹ್ಮವಾಹಿನಿಗಳಾಗಿದ್ದರೆ, ಸಾಂಸಾರಿಕ ವಿಷಯಗಳಲ್ಲಿ ಮಗ್ನರಾಗಿದ್ದವರು 'ಸದ್ಯೋವಧುಗಳು' ಎಂದು ಗುರುತಿಸಿಕೊಳ್ಳುತ್ತಿದ್ದರು. ಆದರೆ ಸಾಮಾಜಿಕ ಕಾರಣಗಳಿಂದ ಅರಕ್ಷಿತಕೆ ಕಾಡತೊಡಗಿದವರ ಪರಿಣಾಮವಾಗಿ ಮಹಿಳೆಯರು ವಿದ್ವತ್ ಕ್ಷೇತ್ರವನ್ನು ಬಿಟ್ಟು ವ್ಯಾಕರಣ, ಶಿಕ್ಷಾ ಮೀಮಾಂಸ ಮತ್ತು ಜ್ಯೋತಿಷಿಗಳಂತಹ ವಿಚಾರಗಳನ್ನು ಆಯ್ದು ಅಭ್ಯಸಿಸತೊಡಗಿದರು. ಪ್ರಾಚಾರ್ಯೆಯರೆಂದು ಗುರುತಿಸಿಕೊಳ್ಳುತ್ತಿದ್ದ ಈ ಮಹಿಳೆಯರೊಂದಿಗೆ ಯುದ್ಧ ಶಿಕ್ಷಣವನ್ನು, ಧಾರ್ಮಿಕ ಶಿಕ್ಷಣವನ್ನು ಪಡೆದ ರಾಜಮನೆತನದ ಮಹಿಳೆಯರು ಕೂಡಾ ಇದ್ದರು. ರಾಜಕೀಯ ಚರ್ಚೆಗಳಲ್ಲಿ ಭಾಗವಹಿಸುವ ಅವಕಾಶಗಳನ್ನು ಪಡೆದ ಮಹಿಳೆಯರು ಆ ಕಾಲದಲ್ಲಿ ಇದ್ದರು. ಜೈನರ ಶ್ವೇತಾಂಬರ ಪಂಥ ಸನ್ಯಾಸಿನಿಯರಿಗೆ ವ್ಯವಸ್ಥಿತ ರೀತಿಯಲ್ಲಿ ಶಿಕ್ಷಣವನ್ನು ನೀಡುತ್ತಿದ್ದ ಉಲ್ಲೇಖಗಳಿವೆ. ಜೈನಧರ್ಮ ಗ್ರಂಥಗಳನ್ನು ಓದಿ ವ್ಯಾಖ್ಯಾನ ಕೊಡಬಲ್ಲ 'ಸಾಧ್ವಿ'ಯರು ಶ್ರಾವಕರಿಗೆ ಬೋಧನೆ ಮಾಡುವಂತಹ ಗೌರವಸ್ಥಾನದಲ್ಲಿದ್ದರು. ಬುದ್ಧನ ಜೀವಿತಕಾಲದಲ್ಲಿ ಪ್ರಮುಖ ಬೋಧಕಿಯರಿದ್ದರು. ರಾಜನ ಆಸ್ಥಾನದಲ್ಲಿ ರಾಮಾಯಣ, ಮಹಾಭಾರತ ಕಾವ್ಯಗಳಲ್ಲಿ ಓದಿಹೇಳುವ ಪಂಡಿತೆಯರು, ಕಾವ್ಯಗಳನ್ನು ರಚಿಸುತ್ತಿದ್ದ ಅರಸು ಕುಮಾರಿಯರು, ರಾಣಿಯರು ಇದ್ದರು.

ಆಧ್ಯಾತ್ಮಿಕ ವಿದ್ಯೆಗೆ ಪ್ರಾಮುಖ್ಯತೆ ಇದ್ದ ಕಾಲದಲ್ಲಿ, ಆಧ್ಯಾತ್ಮ ಕ್ಷೇತ್ರದ ಶಿಕ್ಷಣ ಮತ್ತು ಬೋಧನೆಯಲ್ಲಿ ಪಾಲುಗೊಳ್ಳುತ್ತಿದ್ದ ಮಹಿಳೆಯರಿಗೆ ಸಹಜವಾಗಿ ಗೌರವ, ಮನ್ನಣೆಗಳು ಸಲ್ಲುತ್ತಿದ್ದವು. ಸಂಸಾರದಿಂದ ವಿರಕ್ತಿ ಹೊಂದಿ ಆರಾಧ್ಯದೈವಗಳಿಗೆ ಬದುಕನ್ನು ಮುಡಿಪಾಗಿಟ್ಟ ಸಂತ ಮಹಿಳೆಯರು ಭಕ್ತಿಸಾಹಿತ್ಯ ರಚನೆಯಲ್ಲಿ ತೊಡಗಿಸಿಕೊಳ್ಳುವುದಕ್ಕೆ ಸಮಾಜದಲ್ಲಿ ಅವಕಾಶವಿತ್ತು. ತಂತ್ರವಿದ್ಯೆ ಅರಿತವರು, ಸಂಗೀತ, ನೃತ್ಯ ಮೊದಲಾದ ಲಲಿತಕಲೆಗಳಲ್ಲಿ ನಿಷ್ಣಾತರಾದ ಗಣಿಕೆಯರು, ವಾದ್ಯಗಳನ್ನು ನುಡಿಸುವುದರಲ್ಲಿ ಪರಿಣತಿ ಹೊಂದಿದ್ದ ವಾರನಾರಿಯರು, ಛಂದೋಲಂಕಾರಗಳಲ್ಲಿ ಅಭ್ಯಸಿಸಿ ವಿದ್ವತ್ ಗೋಷ್ಠಿಗಳಲ್ಲಿ ಭಾಗವಹಿಸುತ್ತಿದ್ದ ಮಹಿಳೆಯರು ಶಾಸನ, ಕಾವ್ಯ ಮತ್ತು ಪ್ರವಾಸಿ ಬರವಣಿಗೆ ಮೊದಲಾದವುಗಳಲ್ಲಿ ಉಲ್ಲೇಖಿತರಾಗಿದ್ದಾರೆ. ಚರಿತ್ರೆ ಪಠ್ಯಗಳನ್ನು ಆಧಾರವಾಗಿಟ್ಟು ಹೇಳುವುದಾದರೆ ಜ್ಞಾನದ ಅರಿವು ಮತ್ತು ಜ್ಞಾನದ ಪ್ರಸಾರ ಕಾರ್ಯಗಳಲ್ಲಿ ತೊಡಗಿಸಿಕೊಂಡ 'ಸುಶಿಕ್ಷಿತ' ಮಹಿಳೆಯರಲ್ಲಿ ಹೆಚ್ಚಿನವರು ಸಮಾಜದ ಉನ್ನತ ವರ್ಗಕ್ಕೆ ಸೇರಿದವರು. ನಿರ್ದಿಷ್ಟ ರಾಜಮನೆತನಕ್ಕೆ ಅಥವಾ ಧರ್ಮಕ್ಕೆ ಸೇರಿದವರು. ಇನ್ನು

ಲಲಿತಕಲೆಗಳಲ್ಲಿ ಆಸಕ್ತಿಹೊಂದಿ ಸಂಗೀತ, ನೃತ್ಯ ಮೊದಲಾದ ಕಲೆಗಳಲ್ಲಿ ನಿಷ್ಣಾತರೆನಿಸಿಕೊಂಡವರು ಗಣಿಕಾ ವರ್ಗಕ್ಕೆ ಸೇರಿದವರು. ಈ ಎಲ್ಲಾ ಮಹಿಳೆಯರು ಗೃಹಕ್ಕೆ ಸೀಮಿತವಾದ ಜವಾಬ್ದಾರಿಗಳಿಂದ ಮುಕ್ತರಾದವರು.

ಆರ್ಥಿಕವಾಗಿ ಕೆಳಮಟ್ಟದವರಾಗಿ ಬೇರೆ ಬೇರೆ ವೃತ್ತಿಯನ್ನು ಅವಲಂಬಿಸಿ ಬದುಕು ಸಾಗುತ್ತಿದ್ದ ನೂರಾರು ಮಹಿಳೆಯರು ಆ ಕಾಲದಲ್ಲಿದ್ದರು. ಲೆಕ್ಕಪತ್ರ ತಪಾಸಿಗರು, ಪಡಿಯರತಿಯರು, ವಾದ್ಯ ನುಡಿಸುವವರು, ದಾದಿಯರು, ಹೊಲಿಗೆ ಹೆಣಿಗೆ ಮಾಡುವವರು ಇತ್ಯಾದಿ.

ಔಷಧ ತಯಾರಿಸುವುದು, ನೂಲುವುದು, ಪ್ರಾಣಿಗಳ ಸಾಕಣೆ, ಲೆಕ್ಕಾಚಾರದ ಮೇಲ್ವಿಚಾರಣೆ, ಸಾಮಾಗ್ರಿಗಳ ಮಾರಾಟ ಮೊದಲಾದವುಗಳು ಗೃಹಿಣಿಯರು ಕೈಗೊಳ್ಳಬಹುದಾದ ಕಾರ್ಯಗಳೆಂದು ಪ್ರಾಚೀನ ಗ್ರಂಥಗಳಲ್ಲಿ ಉಲ್ಲೇಖಿತವಾಗಿರುವುದನ್ನು ಗಮನಿಸಿದಾಗ, ಸ್ತ್ರೀಯರಿಗೆ ಪ್ರತ್ಯೇಕ ರೀತಿಯ ಶಿಕ್ಷಣ ಮತ್ತು ತರಬೇತಿಯನ್ನು ನೀಡಲಾಗುತ್ತಿತ್ತು ಎಂದು ತಿಳಿದುಬರುತ್ತದೆ. ಹದಿನೇಳನೆಯ ಶತಮಾನದಲ್ಲಿ ಬೆಳವಡಿ ಮಲ್ಲಮ್ಮ ಬಾಲ್ಯದಲ್ಲಿ ತನ್ನ ಅಣ್ಣನೊಂದಿಗೆ ಅರಮನೆಯ ಪಾಠಶಾಲೆಯಲ್ಲಿ ಸಹ–ಶಿಕ್ಷಣ ಪಡೆದ ಉದಾರಹಣೆಯನ್ನು ಬಿಟ್ಟರೆ, ಆ ಕಾಲದಲ್ಲಿ ಹೆಣ್ಣುಮಕ್ಕಳಿಗೆ ಮನೆಯಲ್ಲಿಯೇ ಶಿಕ್ಷಣವನ್ನು ನೀಡಲಾಗುತ್ತಿತ್ತು.

### ೨.೧.೧ ಆಧುನಿಕ ಕಾಲದ ಮಹಿಳಾ ಶಿಕ್ಷಣ

ಮಹಿಳೆಯರ ಬದುಕಿನಲ್ಲಿ ಶಿಕ್ಷಣವು ವಿಮೋಚನಾತ್ಮಕ ಮತ್ತು ಸಬಲೀಕರಣ ಪಾತ್ರವನ್ನು ನಿರ್ವಹಿಸುತ್ತದೆ ಎಂದು ತಿಳಿಯಲಾಗಿದೆ. ಮನುಷ್ಯನ ಅದರಲ್ಲಿಯೂ ವಿಶೇಷವಾಗಿ ಮಹಿಳೆಯ ಜೀವನ ಮಟ್ಟವು ಸುಧಾರಣೆ ಕಾಣಲು ಶಿಕ್ಷಣ ಅವಶ್ಯಕವಾಗಿದೆ. ಸುಶಿಕ್ಷಿತ ಮಹಿಳೆಯೊಬ್ಬಳು ತನ್ನ ಬದುಕಿನ ನಿರ್ವಹಣೆಗೆ ಸಾರ್ವಜನಿಕ ಕ್ಷೇತ್ರದ ಪ್ರವೇಶಾವಕಾಶವನ್ನು ಪಡೆಯುವಳಲ್ಲದೆ, ಅವಳ ವ್ಯಕ್ತಿತ್ವ ವಿಕಸನಕ್ಕೆ ಕೂಡಾ ಶಿಕ್ಷಣವು ಪೂರಕವಾಗಿ ಕಾರ್ಯನಿರ್ವಹಿಸುತ್ತದೆ. ಮಹಿಳೆಯರ ಸ್ಥಾನವನ್ನು ಗುರುತಿಸಲು ಸಹಕಾರಿಯೆನಿಸುವ ಅನೇಕ ವಿಚಾರಗಳಲ್ಲಿ ಶಿಕ್ಷಣ ಕೂಡ ಒಂದು. ಈ ವಿಚಾರಗಳ ಹಿನ್ನೆಲೆಯಲ್ಲಿ ಹದಿನೆಂಟನೆಯ ಶತಮಾನದಲ್ಲಿ ಮಹಿಳಾ ಶಿಕ್ಷಣವನ್ನು ಪ್ರಧಾನ ನೆಲೆಯಲ್ಲಿ ಪರಿಗಣಿಸುವ ಪ್ರಯತ್ನಗಳು ಸಮಾಜ ಸುಧಾರಕರಿಂದ, ವಸಾಹತು ಆಡಳಿತಗಾರರಿಂದ, ಕ್ರೈಸ್ತ ಮಿಷಿನರಿಗಳಿಂದ ಮತ್ತು ಸ್ವಾತಂತ್ರ್ಯ ಹೋರಾಟಗಾರರಿಂದ ನಡೆದವು.

ಭಾರತೀಯ ಸಮಾಜದ ಸುಧಾರಣೆಗೆ ಸ್ತ್ರೀ ಶಿಕ್ಷಣವು ಅಗತ್ಯವೆಂಬ ಭಾವನೆ ಸಮಾಜ ಸುಧಾರಕರಲ್ಲಿತ್ತು. ಸಾಮಾಜಿಕ ಪ್ರಗತಿಪರ ಕಾರ್ಯಯೋಜನೆಗಳು ಅರ್ಥಪೂರ್ಣವಾಗಲು ಮಹಿಳಾ ಶಿಕ್ಷಣಕ್ಕೆ ಆದ್ಯತೆ ಇರಬೇಕು ಎಂಬುದು ಅವರ ತಿಳುವಳಿಕೆಯಾಗಿತ್ತು. ಶಿಕ್ಷಣವು ಮಹಿಳೆಯನ್ನು ಸಂಪ್ರದಾಯದ ಕಪಿಮುಷ್ಠಿಯಿಂದ ಮುಕ್ತಗೊಳಿಸುವುದು ಎಂದು ಅವರ ಭಾವನೆಯಾಗಿತ್ತು. ಅವರು ಮುಖ್ಯವಾಗಿ ಮನೆಯನ್ನು

ಕೇಂದ್ರವಾಗಿಟ್ಟುಕೊಂಡು ಸ್ತ್ರೀ ಶಿಕ್ಷಣದ ನಿರ್ವಚನವನ್ನು ಮಾಡಿದರು. ದಯಾನಂದ ಸರಸ್ವತಿಯವರು ಭಾರತೀಯ ಹೆಣ್ಣುಮಕ್ಕಳನ್ನು ಆರ್ಯ ಮಾತೆಯರನ್ನಾಗಿ ರೂಪಿಸುವ ವಿದ್ಯಾಭ್ಯಾಸದ ಕ್ರಮವನ್ನು ಅನುಮೋದಿಸಿದರು. ಕೇಶವ ಕರ್ವೆಯವರ ದೃಷ್ಟಿಯಲ್ಲಿ ಹೆಣ್ಣು ಮಕ್ಕಳಿಗೆ ಪುರುಷರಿಗಿಂತ ಭಿನ್ನವಾದ, ಅವರ ಕಾರ್ಯಕ್ಷೇತ್ರದ ಸಮರ್ಥ ನಿರ್ವಹಣೆಗೆ ಶಿಕ್ಷಣದ ಅಗತ್ಯವಿತ್ತು (ಶಾಂತ, ೨೦೦೨).

ಲಾರ್ಡ್ ವಿಲಿಯಂ ಬೆಂಟಿಂಕ್ ಭಾರತದ ಗವರ್ನರ್ ಜನರಲ್ ಆಗಿ ಕ್ರಿ.ಶ. ೧೮೨೮ರಲ್ಲಿ ಅಧಿಕಾರ ವಹಿಸಿಕೊಂಡ ನಂತರ ಸಾಕ್ಷರತಾ ಪ್ರಧಾನವಾದ ಸಾರ್ವತ್ರಿಕ ಶಿಕ್ಷಣ ಪದ್ಧತಿ ಭಾರತದಲ್ಲಿ ಬಳಕೆಗೆ ಬಂದಿತು. ಇದಕ್ಕೆ ಸಮಾಜ ಸುಧಾರಕರಿಂದ ಅನುಮೋದನೆ ದೊರೆಯಿತು. ಆದರೆ ಅದುವರೆಗೆ ಪ್ರಚಲಿತವಿದ್ದ ಜನರ ಅವಶ್ಯಕತೆಗಳಿಗೆ ಅನುಗುಣವಾಗಿ ರೂಪ ತಾಳಿದ್ದ ಭಾರತೀಯ ಶಿಕ್ಷಣ ಪದ್ಧತಿ ಹಿಂದೆ ಸರಿಯುವಂತಾಯಿತು. ಆಡಳಿತಗಾರರಿಂದ ಪ್ರೋತ್ಸಾಹ ದೊರೆತ ಕಾರಣವಾಗಿ ಮಿಷನರಿಗಳು ಹಲವು ಶಾಲೆಗಳನ್ನು ಹೆಣ್ಣುಮಕ್ಕಳಿಗಾಗಿ ಕಾನ್ವೆಂಟ್‌ಗಳನ್ನು ಪ್ರಾರಂಭಿಸಿದರು.

ಸ್ವಾತಂತ್ರ್ಯ ಹೋರಾಟಗಾರರು ಭಾರತದಲ್ಲಿ ಏಳು ವರ್ಷ ಅವಧಿಯ ಸಾರ್ವತ್ರಿಕ ಶಿಕ್ಷಣ ಪ್ರತಿಯೊಬ್ಬ ಮಗುವಿಗೆ ಲಭ್ಯವಿರಬೇಕು ಎಂಬ ಅಭಿಪ್ರಾಯವನ್ನು ಹೊಂದಿದ್ದರು. ೧೯೩೭ರಲ್ಲಿ ಗಾಂಧೀಜಿಯವರು ಪ್ರತಿಪಾದಿಸಿದ ಮೂಲಭೂತ ಶಿಕ್ಷಣ ವಿನ್ಯಾಸದಲ್ಲಿ ಹೆಣ್ಣು ಮಕ್ಕಳೂ ಸೇರಿದಂತೆ, ಎಲ್ಲಾ ಮಕ್ಕಳಿಗೆ, ಏಳು ವರ್ಷಗಳ ಸಾರ್ವತ್ರಿಕ ಶಿಕ್ಷಣವು ಖಡ್ಡಾಯವಾಗಿತ್ತು. ಕಾಂಗ್ರೆಸ್ ಆಡಳಿತವಿದ್ದ ಎಲ್ಲಾ ಪ್ರಾಂತ್ಯಗಳಲ್ಲಿ ಈ ಮೂಲಭೂತ ಶಿಕ್ಷಣ ಪದ್ಧತಿಯನ್ನು ಅಳವಡಿಸಲಾಗಿತ್ತು.

ಹೆಣ್ಣುಮಕ್ಕಳಿಗೆ ಪ್ರತ್ಯೇಕ ವಿದ್ಯಾ ಸಂಸ್ಥೆಗಳನ್ನು ಸ್ಥಾಪಿಸುವುದರ ಮೂಲಕ ಭಾರತದಲ್ಲಿ ಮಹಿಳಾ ಶಿಕ್ಷಣಕ್ಕೆ ಚಾಲನೆ ದೊರೆಯಿತು. ೧೮೨೪ರಲ್ಲಿ ಕ್ರಿಶ್ಚಿಯನ್ ಮಿಷನರಿಗಳಿಂದ ಮುಂಬೈಯಲ್ಲಿ ಹೆಣ್ಣುಮಕ್ಕಳಿಗಾಗಿ ಶಾಲೆಯನ್ನು ತೆರೆಯಲಾಯಿತು. ೧೮೪೯ರಲ್ಲಿ ಜಾನ್‌ಡ್ರಿಂಕ್ ವಾಟರ್ ಬೆಥೂನ್ ಅವರು 'ಹಿಂದೂ ಬಾಲಿಕಾ ವಿದ್ಯಾಲಯ'ವನ್ನು ಪ್ರಾರಂಭಿಸಿದರು. ಈ ಸಂಸ್ಥೆಯ ಕಾರ್ಯದರ್ಶಿಯಾಗಿದ್ದವರು ಈಶ್ವರಚಂದ್ರ ವಿದ್ಯಾಸಾಗರರವರು. ಈಶ್ವರಚಂದ್ರ ವಿದ್ಯಾಸಾಗರರವರು ೧೮೫೦ರಲ್ಲಿ ಶಿಕ್ಷಣಾಧಿಕಾರಿಯಾಗಿ ನೇಮಕಗೊಂಡ ನಂತರ ೩೫ ಶಾಲೆಗಳನ್ನು ಹೆಣ್ಣುಮಕ್ಕಳಿಗಾಗಿ ಪ್ರಾರಂಭಿಸಿದರು. ಮಹಾರಾಷ್ಟ್ರದಲ್ಲಿ ಜ್ಯೋತಿಬಾಪುಲೆಯವರು ೧೮೪೮ರಲ್ಲಿ ಕನ್ಯಾಶಾಲೆಯನ್ನು ಪ್ರಾರಂಭಿಸಿದರು. ಅವರು ೧೮೫೧ರಲ್ಲಿ ದಲಿತ ಮಹಿಳೆಯರಿಗಾಗಿ ಶಾಲೆಯನ್ನು ಪ್ರಾರಂಭಿಸಿದರು. ೧೮೫೪ರ ಹೊತ್ತಿಗೆ ಮುಂಬೈ ಪ್ರಾಂತ್ಯದಲ್ಲಿದ್ದ ೬೫ ಹೆಣ್ಣುಮಕ್ಕ್ಳ ಶಾಲೆಗಳಲ್ಲಿ ೩,೫೦೦ ವಿದ್ಯಾರ್ಥಿನಿಯರು, ಮದ್ರಾಸ್ ಪ್ರಾಂತ್ಯದಲ್ಲಿದ್ದ ೨೫೬ ಶಾಲೆಗಳಲ್ಲಿ ೮೦೦೦ ವಿದ್ಯಾರ್ಥಿನಿಯರು, ಪಶ್ಚಿಮಬಂಗಾಳದಲ್ಲಿದ್ದ ೨೮೮ ಶಾಲೆಗಳಲ್ಲಿ ೭೦೦೦ ವಿದ್ಯಾರ್ಥಿನಿಯರಿದ್ದರು (ಇಂದಿರಾ, ೨೦೦೨).

ಮೈಸೂರು ಸಂಸ್ಥಾನದಲ್ಲಿ ಹದಿನೆಂಟನೆಯ ಶತಮಾನದಲ್ಲಿ ಮಹಿಳಾ ಶಿಕ್ಷಣ ಪ್ರಾರಂಭವಾಯಿತು. ೧೮೩೩ರಲ್ಲಿ ಲಂಡನ್ ಮಿಷನ್ ಸಂಸ್ಥೆ ಬಳ್ಳಾರಿಯಲ್ಲಿ ಹೆಣ್ಣುಮಕ್ಕಳ ಶಾಲೆಯನ್ನು ಪ್ರಥಮವಾಗಿ ಪ್ರಾರಂಭಿಸಿತು. ನಂತರ ಇದೇ ಸಂಸ್ಥೆ ಬೆಳಗಾವಿ ವಲಯದಲ್ಲಿ ಕೆಲವು ಬಾಲಕಿಯರ ಶಾಲೆಗಳನ್ನು ಪ್ರಾರಂಭಿಸಿದರು. ೧೮೬೦–೧೮೭೦ರ ದಶಕದಲ್ಲಿ ಧಾರವಾಡ, ಬಿಜಾಪುರ ಮತ್ತು ಉತ್ತರಕನ್ನಡ ಜಿಲ್ಲೆಗಳಲ್ಲಿ ಬಾಲಕಿಯರ ಶಾಲೆಗಳು ಕಾರ್ಯ ನಿರ್ವಹಿಸುತ್ತಿದ್ದವು. ದಕ್ಷಿಣಕನ್ನಡ ಜಿಲ್ಲೆಯಲ್ಲಿ ಎಂಬತ್ತರ ದಶಕದಲ್ಲಿ ಏಳು ಹೆಣ್ಣುಮಕ್ಕಳ ಶಾಲೆಗಳಿದ್ದವು. ಇದೇ ಅವಧಿಯಲ್ಲಿ ಹೆಣ್ಣುಮಕ್ಕಳಿಗಾಗಿ ಪ್ರತ್ಯೇಕ ಕಾಲೇಜನ್ನು ಮಂಗಳೂರಿನಲ್ಲಿ ಸ್ಥಾಪಿಸಲಾಯಿತು. ೧೮೮೨ರಲ್ಲಿ ಲಾರ್ಡ್ ರಿಪ್ಪನ್‌ರ ಸರಕಾರ ಮಹಿಳಾ ಶಿಕ್ಷಣವನ್ನು ಗಮನದಲ್ಲಿಟ್ಟುಕೊಂಡು ಡಾ.ಡಬ್ಲ್ಯೂ.ಡಬ್ಲ್ಯೂ. ಹಂಟರ್‌ರ ನೇತೃತ್ವದಲ್ಲಿ ಶಿಕ್ಷಣ ಆಯೋಗವೊಂದನ್ನು ಸ್ಥಾಪಿಸಿತು. ಈ ಆಯೋಗವು ಮಹಿಳೆಯರಿಗೆ ನೀಡುವ ಶಿಕ್ಷಣದ ಸ್ವರೂಪವನ್ನು ತಿಳಿಯಿತು. ಆ ಕಾಲದ ಸಮಾಜ ಸುಧಾರಕದಲ್ಲಿ ಪ್ರಮುಖರಾಗಿ ಗುರುತಿಸಿಕೊಂಡಿದ್ದ ಪಂಡಿತ ರಮಾಬಾಯಿಯವರನ್ನು ಕರೆಯಿಸಲಾಗಿತ್ತು.

ಹೆಣ್ಣುಮಕ್ಕಳಿಗೆ ಕಲಿಸುವ ಶಿಕ್ಷಕರು ಹೇಗಿರಬೇಕು ಮತ್ತು ಈಗಾಗಲೇ ಇರುವ ಶಿಕ್ಷಣ ವ್ಯವಸ್ಥೆಯಲ್ಲಿ ಆಗಬೇಕಾಗಿರುವ ಸುಧಾರಣೆಗಳು ಯಾವುವು ಎಂದು ಹಂಟರ್ ಆಯೋಗ ಪಂಡಿತ ರಮಾಬಾಯಿಯವರನ್ನು ಕೇಳಿತ್ತು. ಇದಕ್ಕುತ್ತರವಾಗಿ ಪಂಡಿತ ರಮಾಬಾಯಿಯವರು, "ಬೇರೆಯವರಿಗೆ ಕಲಿಸುವ ವೃತ್ತಿಯನ್ನು ಆಯ್ದುಕೊಳ್ಳುವ ಮಹಿಳೆಯರಿಗೆ ಆ ಕೆಲಸಕ್ಕೆ ವಿಶೇಷ ತರಬೇತಿ ಇರಬೇಕು. ಸ್ವಂತ ಭಾಷೆಯೊಂದಿಗೆ ಅವರು ಇಂಗ್ಲಿಷ್ ಭಾಷೆಯನ್ನು ತಿಳಿದುಕೊಂಡಿರಬೇಕು. ಅವರು ವಿವಾಹಿತೆ ಅಥವಾ ಅವಿವಾಹಿತೆ ಅಥವಾ ವಿಧವೆಯಾಗಿರಲಿ, ಅವರು ಕುಲೀನ ಮನೆತನದವರಾಗಿರಬೇಕು. ಪುರುಷರಿಗಿಂತ ಹೆಚ್ಚಿನ ವೇತನವನ್ನು ಅವರು ಪಡೆಯಬೇಕು. ವಿದ್ಯಾರ್ಥಿಗಳು ಕಾಲೇಜು ಪರಿಸರದಲ್ಲಿಯೇ ವಾಸವಾಗಿರಬೇಕು. ಇದರಿಂದ ಅವರ ನಡತೆ ಮತ್ತು ಹವ್ಯಾಸಗಳು ಸುಧಾರಿಸುತ್ತವೆ. ಅವರ ಮೇಲ್ವಿಚಾರಣೆಗಳನ್ನು ಉತ್ತಮ ಸ್ಥಾನದಲ್ಲಿರುವ ಮಹಿಳೆಯೊಬ್ಬಳು ನೋಡಿಕೊಳ್ಳಬೇಕು. ಕಲಿಯುವುದಷ್ಟೇ ಮುಖ್ಯವಾಗಿರುವುದಿಲ್ಲ, ಜೊತೆಗೆ ವಿದ್ಯಾರ್ಥಿನಿಯರ ನಡತೆ ಮತ್ತು ನೈತಿಕತೆಯ ಕಡೆಗೆ ಕೂಡ ಗಮನವನ್ನು ಹರಿಸಬೇಕು. ಹುಡುಗಿಯರ ಶಾಲೆಗಳನ್ನು ಮಹಿಳಾ ಶಿಕ್ಷಕರೇ ನಡೆಸುವಂತಿರಬೇಕು. ಮಹಿಳಾ ವೈದ್ಯರ ಕೊರತೆಯಿಂದ ಸಾವಿರಾರು ಹೆಣ್ಣುಮಕ್ಕಳು ತಮ್ಮ ನೋವನ್ನು ವ್ಯಕ್ತಪಡಿಸಲಾಗದೆ ಸಾವನ್ನಪ್ಪುತ್ತಿದ್ದಾರೆ. ಮಹಿಳೆಯರಿಗೆ ವೈದ್ಯಕೀಯ ಶಿಕ್ಷಣದ ಅವಕಾಶವನ್ನು ಸರಕಾರ ಮಾಡಬೇಕು" ಎಂದು ಹೇಳಿದರು. ಪಂಡಿತ ರಮಾಬಾಯಿಯವರು ಹೆಣ್ಣು ಮಕ್ಕಳ ಶಾಲಾ ಹಾಜರಾತಿಯನ್ನು ದೃಷ್ಟಿಯಲ್ಲಿಟ್ಟು ಶಿಕ್ಷಕಿಯರ ನೇಮಕಾತಿಯನ್ನು, ಅವರಿಗೆ ಸಿಗಬೇಕಾದ ಹೆಚ್ಚಿನ ವೇತನವನ್ನು ಹಂಟರ್ ಆಯೋಗದ ಮುಂದೆ ಪ್ರಸ್ತಾಪಿಸಿರುವುದು ಅವರ ದೂರಗಾಮಿತ್ವವನ್ನು ಸೂಚಿಸುತ್ತದೆ. ವೈದ್ಯಕೀಯ ಕ್ಷೇತ್ರದಲ್ಲಿ ಮಹಿಳೆಯರ ಪ್ರವೇಶದ ಅಗತ್ಯದ ಹಿನ್ನೆಲೆಯನ್ನು ವಿವರಿಸುವುದರ ಮೂಲಕ ಅವರು ಮಹಿಳೆಯರ

ಉನ್ನತ ವ್ಯಾಸಂಗದ ಕಡೆಗೆ ಗಮನ ಹರಿಸಿದ್ದಾರೆ. ಹಂಟರ್ ಆಯೋಗವು ಮಾಡಿದ ಶಿಫಾರಸ್ಸು ಈ ಕೆಳಗಿನಂತಿದೆ.

೧. ಪ್ರಾಥಮಿಕ ಶಿಕ್ಷಣದ ಕಡೆಗೆ ರಾಜ್ಯಗಳು ಗಮನ ಹರಿಸುವುದು.

೨. ಪ್ರಾಥಮಿಕ ಶಿಕ್ಷಣದ ಆಡಳಿತ ಮತ್ತು ನಿಯಂತ್ರಣವನ್ನು ಬ್ರಿಟಿಷ್ ಮಾದರಿಯಲ್ಲಿ ಸ್ಥಳೀಯ ಸಂಸ್ಥೆಗಳಿಗೆ ನೀಡುವುದು (ಗೀತಾ, ೨೦೦೭)

## ೨.೨ ಮಹಿಳಾ ಶಿಕ್ಷಣ ಮತ್ತು ಅಭಿವೃದ್ಧಿ

ಮಹಿಳಾ ಶಿಕ್ಷಣ ಮತ್ತು ಅಭಿವೃದ್ಧಿಗೆ ಆರ್ಥಿಕ, ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ವಲಯದ ನಡುವೆ ನೇರವಾದ ಮತ್ತು ನಿಕಟವಾದ ಸಂಬಂಧವಿದೆ. ಹೀಗಿದ್ದರೂ ಬಹುತೇಕ ವಿಕಾಸಶೀಲ ದೇಶಗಳಲ್ಲಿ ಮಹಿಳಾ ಶಿಕ್ಷಣವು ಉಪೇಕ್ಷಿಸಲ್ಪಟ್ಟಿದೆ. ಈ ಮಾತಿಗೆ ಭಾರತವೇನೂ ಅಪವಾದವಲ್ಲ.

ಅಭಿವೃದ್ಧಿ ಹೊಂದಿದ ಅಥವಾ ಕೈಗಾರಿಕಾ ಶ್ರೀಮಂತ ರಾಷ್ಟ್ರಗಳು ಶೇಕಡಾ ೧೦೦ರಷ್ಟು ಸಾಕ್ಷರತೆ ಹಾಗೂ ಮೂಲಭೂತ ಶಿಕ್ಷಣ ಸಾಧಿಸಿವೆ. ಈ ಅಭಿವೃದ್ಧ ಸಮಾಜಗಳ ಮಹಿಳೆಯರು ಕನಿಷ್ಠ ಮೂಲಭೂತ ಶಿಕ್ಷಣ ಪಡೆಯುವಲ್ಲಿ ಯಶಸ್ವಿಯಾಗಿದ್ದಾರೆ. ಉನ್ನತ ಶಿಕ್ಷಣದಲ್ಲಿ ಪಶ್ಚಿಮದ ಮಹಿಳೆಯರ ಪಾಲು ಪುರುಷರಿಗೆ ಸರಿಸಮನಾಗಿಲ್ಲ ಆದರೂ ಮಹಿಳೆಯರ ಪಾಲು ಅದರಲ್ಲಿ ಕಳೆದ ೩೦–೪೦ ವರ್ಷಗಳಿಂದ ಏರಿಕೆಯಾಗಿಲ್ಲ.

ಪ್ರಗತಿಪರ ದೇಶಗಳಲ್ಲಿ ಮಧ್ಯ ಅಮೇರಿಕಾ, ಲ್ಯಾಟಿನ್ ಅಮೇರಿಕಾ, ಆಫ್ರಿಕಾ ಮತ್ತು ಏಷ್ಯಾದಲ್ಲಿ ಮಹಿಳಾ ಶಿಕ್ಷಣವು ಇನ್ನೂ ಸಾರ್ವತ್ರಿಕವಾಗಿಲ್ಲ. ಈ ದೇಶಗಳಲ್ಲಿ ಇನ್ನೂ ಮಿಲಿಯಾಂತರ ಮಹಿಳೆಯರು ಶಾಲೆಯ ಮುಖದರ್ಶನವನ್ನೇ ಮಾಡಿಲ್ಲ. ಇನ್ನು ಬೇರೆ ಬೇರೆ ಹಂತಗಳ ಶಿಕ್ಷಣದಲ್ಲಿ ಮಹಿಳಾ ಪಾಲು ಅಪೇಕ್ಷಣೀಯ ಮಟ್ಟದ್ದಲ್ಲಿಲ್ಲ.

ಶಿಕ್ಷಣಕ್ಕೆ ಪ್ರವೇಶಾತಿಯನ್ನು ವಿಸ್ತರಿಸುವುದೇ ಕಳೆದ ಮೂರು ದಶಕಗಳ ಪ್ರಗತಿಪರ ದೇಶಗಳ ಪ್ರಮುಖ ನೀತಿ ಉದ್ದೇಶವಾಗಿದೆ. ಇದು ಶಿಕ್ಷಣವು ಸಾಮಾಜಿಕ ಮತ್ತು ಆರ್ಥಿಕಾಭಿವೃದ್ಧಿಗೆ ಆವಶ್ಯಕವೆಂಬುದನ್ನು ಪ್ರತಿಫಲಿಸುವುದು. ಶಿಕ್ಷಣವು ಅನೇಕ ಬಗೆಯ ಲಾಭಗಳನ್ನು ತರುತ್ತದೆ ಎಂಬ ಕುರಿತು ಸಾಕ್ಷ್ಯಗಳು ಹೆಚ್ಚುತ್ತಿವೆ. ಶಿಕ್ಷಣ ತರುವ ಪ್ರಮುಖ ಲಾಭಗಳೆಂದರೆ:

- ಆರೋಗ್ಯ ಮತ್ತು ಉತ್ಪತ್ತಿಯ ಹೆಚ್ಚಳ
- ಶಿಕ್ಷಣದಿಂದ ಬಡಜನರಿಗೆ ದೊರಕುವ ಆರ್ಥಿಕ/ಆರ್ಥಿಕೇತರ ಪ್ರಯೋಜನಗಳು
- ಶಾಲೆಗಳು ಸಾರ್ವತ್ರಿಕವಾಗಿ ಎಲ್ಲರಿಗೂ – ಹುಡುಗಿಯರಿಗೆ ಮತ್ತು ಹೆಂಗಸರಿಗೆ; ಹುಡುಗರಿಗೆ ಮತ್ತು ಪುರುಷರಿಗೆ ತೆರೆಯಲ್ಪಟ್ಟಾಗ ಅದರಿಂದ ದೊರಕುವ ಲಾಭಗಳು ಗುಣಕದೋಪಾದಿಯಲ್ಲಿ ವರ್ಧಿಸುವುವು.
- ಮಹಿಳಾ ಶಿಕ್ಷಣದಲ್ಲಿ ಸಾಕಷ್ಟು ಹೂಡಿಕೆ ಮಾಡಲು ವಿಫಲವಾದರೆ ಅದು ಸುಶಿಕ್ಷಿತ ಪುರುಷರಿಗೆ ದೊರಕಿಸುವ ಸಂಭಾವ್ಯ ಲಾಭಗಳನ್ನು ಕಡಿಮೆಗೊಳಿಸುವುದು. ಈ ವೈಫಲ್ಯವು ಅನೇಕ ಸಾಮಾಜಿಕ ವೆಚ್ಚಗಳನ್ನು ಉತ್ಪತ್ತಿ ಆದಾಯ ಮತ್ತು ಜೀವನಮಟ್ಟ ಏರಿಸುವ ಅವಕಾಶಗಳನ್ನು ವಂಚಿಸುವ ಮೂಲಕ ಎತ್ತರಿಸುತ್ತದೆ. ಹೀಗೆ ಬಡತನ, ಅಲ್ಪ ಉತ್ಪತ್ತಿ ಸಮಸ್ಯೆಗಳೇ ಹುಟ್ಟಿಕೊಳ್ಳುತ್ತವೆ. ಹೀಗಿದ್ದೂ ಪುರುಷರಿಗೆ ಹೋಲಿಸಿದಂತೆ ಮಹಿಳಾ ಶಿಕ್ಷಣವು ಹಿಂದೆ ಬಿದ್ದಿದೆ. ಇದು ಅನೇಕಾನೇಕ ಅಭಿವೃದ್ಧಿಶೀಲ ದೇಶಗಳಲ್ಲಿ ವ್ಯಕ್ತಿಗತ ಮತ್ತು ರಾಷ್ಟ್ರೀಯ ಕಲ್ಯಾಣದ ಮೇಲೆ ವಿಭಿನ್ನ ದುಷ್ಪರಿಣಾಮಗಳನ್ನುಂಟು ಮಾಡುತ್ತದೆ.

**ವಿಕಾಸಶೀಲ ದೇಶಗಳಲ್ಲಿ ಶಿಕ್ಷಣದ ಸ್ಥಿತಿಗತಿ**

ಸಾಕ್ಷರತೆ, ಶಾಲಾ ದಾಖಲಾತಿ ಮತ್ತು ಶಾಲೆಯಲ್ಲಿ ಕಳೆಯುವ ವರ್ಷಗಳ ಸಂಖ್ಯೆ ಮುಂತಾದ ಮಾಪಕಗಳಿಂದ ಶಿಕ್ಷಣದ ಮಟ್ಟವನ್ನು ಯಾವುದೇ ದೇಶದಲ್ಲಿ ಯಾವುದೇ ಜನವರ್ಗಕ್ಕೆ ಅಳೆಯಬಹುದು. ಇದುವರೆಗೆ ನಡೆದಿರುವ ಆನ್ವಯಿಕ ಅಧ್ಯಯನಗಳು ಎರಡು ಸಂಗತಿಗಳನ್ನು ಬೆಳಕಿಗೆ ತಂದಿವೆ.

ಅ) ಎಲ್ಲಾ ವಿಕಾಸಶೀಲ ದೇಶಗಳಲ್ಲಿ (ಬೆರಳೆಣಿಕೆಯಷ್ಟನ್ನು ಹೊರತು ಪಡಿಸಿ) ಮಹಿಳಾ ಶಿಕ್ಷಣವು ಅತ್ಯಲ್ಪವಾಗಿದೆ.

ಆ) ಶಿಕ್ಷಣದಲ್ಲಿ ಲಿಂಗ ಅಂತರವು ಬಡದೇಶಗಳಲ್ಲಿ ಅಗಾಧವಾಗಿದೆ.

**೨.೧.೩ ಮಹಿಳಾ ಶಿಕ್ಷಣಕ್ಕೆ ಸಂಬಂಧಿಸಿದಂತೆ ಕೈಗೊಳ್ಳಲಾದ ಕೆಲವು ಮಹತ್ವದ ಅಧ್ಯಯನಗಳ ಫಲಿತಾಂಶವನ್ನು ಕೆಳಕಂಡಂತೆ ಸಂಕ್ಷೇಪಿಸಬಹುದಾಗಿದೆ:**

೧) ವಿಶ್ವದಾದ್ಯಂತ ಸಾಕ್ಷರತೆಯನ್ನು ಶಿಕ್ಷಣದ ಅತ್ಯಂತ ಪ್ರಮುಖ ಗುರಿಗಳಲ್ಲೊಂದೆಂದು ಪರಿಗಣಿಸಲಾಗಿದೆ. ಓದುವ ಮತ್ತು ಬರೆಯುವ ಸಾಮರ್ಥ್ಯವನ್ನು ಮಾನವನ ಮೂಲಭೂತ ಹಕ್ಕು ಎಂದು ಎಲ್ಲೆಡೆ

ಪರಿಗಣಿಸಲಾಗಿದೆ. ಹೀಗಿದ್ದರೂ ಅನೇಕಾನೇಕ ವಿಕಾಸಶೀಲ ದೇಶಗಳಲ್ಲಿ ೧೯೮೦ರ ದಶಕಗಳಲ್ಲಿ ಶೇಕಡಾ ೨೦ರಿಂದ ೪೦ರಷ್ಟು ಪ್ರಮಾಣದಲ್ಲಿ ಮಹಿಳಾ ಸಾಕ್ಷರತೆ ದರಗಳಿದ್ದವು. ಅಲ್ಲದೆ, ಪುರುಷ ಸಾಕ್ಷರತೆಯ ಶೇಕಡಾ ೬೦–೭೦ಕ್ಕೂ ಹೆಚ್ಚಿರುವ ಕೆಲವು ವಿಕಾಸಶೀಲ ದೇಶಗಳಲ್ಲಿ (ಲಿಬ್ಯಾ, ಚೀನಾ, ಝೈರೇ, ಟರ್ಕಿ, ಬೋತ್ಸುವಾನಾ) ಸಾಕ್ಷರತೆಯ ಲಿಂಗ ಅಂತರವು ೧೯೮೦ರ ದಶಕದಲ್ಲಿ ಶೇಕಡಾ ೨೦ರಿಂದ ೩೦ರಷ್ಟಿತ್ತು. ಆದರೆ ಕೊಲಂಬಿಯಾ ಡೊಮಿನಿಕನ್ ರಿಪಬ್ಲಿಕ್, ಫಿಲಿಪೈನ್ಸ್‌ನಲ್ಲಿ ಪುರುಷ ಸ್ತ್ರೀ ಸಾಕ್ಷರತೆ ದರಗಳು ಸಮನಾಗಿದ್ದವು.

೨) ವಯಸ್ಕರ ಅಲ್ಪ ಸಾಕ್ಷರತೆ ದರಗಳು ಹಿಂದಿನ ಅವಧಿಗಳ ಮಹಿಳಾ ಶಿಕ್ಷಣದ ಅಪೂರ್ಣ ಹೋರಾಟದ ಫಲವಾಗಿರುವುವು. ಈ ಸಮಸ್ಯೆ ಎಲ್ಲಾ ವಿಕಾಸಶೀಲ ದೇಶಗಳಲ್ಲೂ ಎಲ್ಲಾ ಶಾಲೆಗಳ ಮಟ್ಟಗಳಲ್ಲೂ ಬಾಲಕ–ಬಾಲಕಿಯರ ದಾಖಲಾತಿ ದರಗಳು ಏರಿಕೆಯಾಗುತ್ತಿವೆ ನಿಜ. ಆದರೆ ಹುಡುಗಿಯರ ದಾಖಲಾತಿ ದರಗಳು ಹುಡುಗರಿಗಿಂತ ಅಲ್ಪವಾಗಿದೆ. ಇದು ವಿಸ್ತೃತ ಅಂತರದ ರೂಪವನ್ನು ಕಡುಬಡ ದೇಶಗಳಲ್ಲಿ ತಳೆದಿವೆ. ಉದಾಹರಣೆಗೆ ಹುಡುಗರು ಮತ್ತು ಹುಡುಗಿಯರ ನಡುವಣ ಪ್ರಾಥಮಿಕ ಶಾಲಾ ದಾಖಲಾತಿ ಅಂತರವು ಶೇಕಡಾ ೨೦ರಷ್ಟಿದ್ದು ೧೯೬೦ರ ದಶಕದಿಂದಲೂ ಮುಂದುವರೆದುಕೊಂಡು ಬಂದಿದೆ.

೩) ಶಾಲೆ ತ್ಯಜಿಸುವಿಕೆ ದರಗಳು ಮತ್ತು ಶಾಲೆಯಲ್ಲಿ ಉಳಿಯುವ ವರ್ಷಗಳು – ಈ ಅಂಶಗಳನ್ನು ಶಾಲಾ ದಾಖಲಾತಿ ದರಗಳು ಮರೆಮಾಚುತ್ತವೆ. ಒಟ್ಟು ದಾಖಲಾತಿ ಪೈಕಿ ಎಷ್ಟು ಮಕ್ಕಳು ಶಾಲೆಯಲ್ಲಿ ಎಷ್ಟು ವರ್ಷಗಳವರೆಗೆ ಉಳಿದು ಉತ್ತೀರ್ಣರಾಗುತ್ತ ಮುಂದುವರೆದು; ಅವರ ಪೈಕಿ ಎಷ್ಟು ಮಕ್ಕಳು ಅನುತ್ತೀರ್ಣರಾಗಿ ಶಾಲೆ ತ್ಯಜಿಸಿದರು; ಬಡತನ ಮತ್ತು ಇತರ ಕಾರಣಗಳಿಗಾಗಿ ಶಾಲೆ ತೊರೆದರು ಎನ್ನುವುದೂ ಕೂಡಾ ಮಕ್ಕಳು ಶೈಕ್ಷಣಿಕ ಸಾಧನೆಯ ಮಾಪಕಗಳೇ ಆಗಿವೆ.

i) ಪ್ರಾಥಮಿಕ ಹಂತದಲ್ಲೇ ಶಾಲೆ ತ್ಯಜಿಸುವವರ ಸಂಖ್ಯೆ ಹೆಚ್ಚಿದರೆ ಅಂಥ ದೇಶಗಳಲ್ಲಿ ಸಾಕ್ಷರತೆ ಸಾರ್ವತ್ರಿಕವಾಗಿರುವುದಿಲ್ಲ. ಬಹುತೇಕ ಬಡ ದೇಶಗಳಲ್ಲಿ ಈ ಸಮಸ್ಯೆ ವ್ಯಾಪಕವಾಗಿದೆ.

ii) ಶಾಲೆ ತ್ಯಜಿಸುವ ಮಕ್ಕಳ ಪೈಕಿ ಹೆಣ್ಣು ಮಕ್ಕಳೇ ಹೆಚ್ಚು.

iii) ಬಡ ದೇಶಗಳಲ್ಲಿ ಬೇಗನೆ ಶಾಲೆ ತ್ಯಜಿಸುವುದರಿಂದ ಶಾಲೆಗಳಲ್ಲಿ ಸುದೀರ್ಘಕಾರಿ ಕಲಿಯುವ ಮಕ್ಕಳ ಸಂಖ್ಯೆ ಇಳಿತಾಯವಾಗುವುದು.

iv) ಮಧ್ಯಮ ಆದಾಯದ ದೇಶಗಳಲ್ಲಿ ಶಾಲೆ ತ್ಯಜಿಸುವ ಮಕ್ಕಳ ಸಂಖ್ಯೆ ಕ್ರಮೇಣ ಇಳಿತಾಯವಾಗುವುದು. ಇದಕ್ಕನುಗುಣವಾಗಿ ಶಾಲೆಗಳಲ್ಲೇ ಶಿಕ್ಷಣ ಮುಂದುವರಿಸುವ ಹೆಣ್ಣು-ಗಂಡು ಮಕ್ಕಳ ಸಂಖ್ಯೆ ಕ್ರಮೇಣ ಹೆಚ್ಚುವುದು.

v) ಬಡ ದೇಶಗಳಲ್ಲಿ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳಲ್ಲಿ ಮಹಿಳಾ ಶಿಕ್ಷಣದ ಉನ್ನತಿಗಾಗಿ ಜರೂರೆಂದು ಎಲ್ಲಾ ದೇಶಗಳಲ್ಲಿ ಶಿಕ್ಷಣ ತಜ್ಞರು ಪ್ರತಿಪಾದಿಸುತ್ತಿರುವುದು ವೈಜ್ಞಾನಿಕವಾಗಿ ಸರಿ. ಈ ಚಿಂತನೆಯ ಪರಿಣಾಮವೆಂಬಂತೆ ೧೯೮೦ರ ದಶಕದ ನಂತರ ಪ್ರಾಥಮಿಕ ಶಾಲೆಗಳಲ್ಲಿ ಶೇಕಡಾ ೫೦ರಷ್ಟು ಮಾಧ್ಯಮಿಕ ಶಾಲೆಗಳಲ್ಲಿ ಶೇಕಡಾ ೩೩ರಷ್ಟು ಶಿಕ್ಷಕಿಯರಿದ್ದಾರೆ. ಇದರಿಂದಾಗಿ ಮಹಿಳಾ ಶಿಕ್ಷಣ ಉತ್ತಮಗೊಳ್ಳಬಹುದೆಂದು ತರ್ಕಿಸ ಲಾಗುತ್ತದೆ.

vi) ಉನ್ನತ ಶಿಕ್ಷಣದಲ್ಲೂ ಮಹಿಳಾ ಪಾಲು ಅತ್ಯಲ್ಪವೇ. ಆಫ್ರಿಕಾ ಉಪಸಹಾರಾ ಮತ್ತು ದಕ್ಷಿಣ ಏಷ್ಯಾದಲ್ಲಿ ಇತರ ವಿಕಾಸಶೀಲ ದೇಶಗಳಿಗಿಂತ ಉನ್ನತ ಶಿಕ್ಷಣದಲ್ಲಿ ಮಹಿಳಾ ಪ್ರಾತಿನಿಧ್ಯ ಅತ್ಯಲ್ಪವಾಗಿತ್ತು. ಇದು ೧೯೮೦ರ ಚಿತ್ರ. ನಂತರ ಇದು ಗಣನೀಯವಾಗಿಯೇನೂ ಬದಲಾಗಿಲ್ಲ ಆದರೆ ಲ್ಯಾಟಿನ್ ಅಮೇರಿಕಾ ಮತ್ತು ಅರೇಬಿಯನ್ ದೇಶಗಳಿಗೆ ಉನ್ನತ ಶಿಕ್ಷಣ ಕ್ಷೇತ್ರದಲ್ಲಿ ಮಹಿಳಾ ಪ್ರಾತಿನಿದ್ಯ ಇತರೆಡೆಗಳಿಗಿಂತ ಹೆಚ್ಚು ವೇಗವಾಗಿ ಬೆಳೆಯುತ್ತಿದೆ.

## ಶಿಕ್ಷಣದಲ್ಲಿ ಲಿಂಗ ಅಂತರ – ಅಭಿವೃದ್ಧಿಗೆ ಮಾರಕ

ಯಾವುದೇ ತೆರನಾದ ಶಿಕ್ಷಣ-ಸಂಬಂಧಿ ಲಿಂಗ ಅಂತರವು ಅಭಿವೃದ್ಧಿಗೆ ದುಬಾರಿಯಾಗುವುದು. ಆರ್ಥಿಕಾಭಿವೃದ್ಧಿ ಎಂದರೆ ಆರ್ಥಿಕ ಪ್ರಗತಿ ಮತ್ತು ಜೀವನ ಮಟ್ಟದ ಸರ್ವತ್ರ ಹೆಚ್ಚಳ. ಈ ಉದ್ದೇಶಗಳ ಸಾಧನೆಗೆ ಮಹಿಳೆ ಶಿಕ್ಷಣ ಹೇಗೆ ಕೊಡುಗೆ ಸಲ್ಲಿಸಬಲ್ಲುದು? ಈ ಪ್ರಶ್ನೆಗೆ ಉತ್ತರವು ಹೀಗಿದೆ.

ಗರಿಷ್ಠ ರಾಷ್ಟ್ರೀಯ ಉತ್ಪನ್ನ, ತಲಾವಾರು ಆದಾಯ, ಸಮಗ್ರ ಕುಟುಂಬ ಕಲ್ಯಾಣ, ಜೀವ ನಿರೀಕ್ಷೆ (ಜನನ ಸಮಯದಲ್ಲಿ), ಶಿಶು ಮತ್ತು ತಾಯಂದಿರ ಮರಣ ದರಗಳು, ಒಟ್ಟು ಪ್ರಜನನ ದರಗಳಲ್ಲಾಗುವ ಬದಲಾವಣೆಗಳು.

“ಮಹಿಳಾ ಶಿಕ್ಷಣದ ಮಟ್ಟ ಮತ್ತು ಶಿಕ್ಷಣದಲ್ಲಿನ ಲಿಂಗ ಅಂತರಗಳು ಕುಟುಂಬದ ಯೋಗಕ್ಷೇಮ (ಸಮಗ್ರವಾಗಿ), ಮತ್ತು ಆರ್ಥಿಕ ಬೆಳವಣಿಗೆಯ ಪ್ರಮುಖ ನಿರ್ಣಾಯಕಗಳಾಗಿವೆ. ಮಹಿಳಾ ಶಿಕ್ಷಣವನ್ನು ಉತ್ತಮಪಡಿಸುವುದರಿಂದ ದೊರಕುವ ಲಾಭಗಳ ವ್ಯಕ್ತಿಗತ ಉತ್ಪತ್ತಿ ಮತ್ತು ಆದಾಯ ಹೆಚ್ಚಳಕ್ಕಿಂತಲೂ

ದೂರಕ್ಕೆ ಸಾಗುವುದು. ಫಲವಂತಿಕೆಯ ಇಳಿತಾಯವಾಗುವಾಗ, ಜನಸಂಖ್ಯಾ ಒತ್ತಡವು ಸಡಿಲವಾಗುತ್ತದೆ. ಕುಟುಂಬವೊಂದರ ಆರೋಗ್ಯ ಉತ್ತಮಗೊಳ್ಳುವಾಗ, ಆದರ ಸದಸ್ಯರ ಜೀವನ ಮಟ್ಟ ಮತ್ತು ನಿರೀಕ್ಷಿತ ಜೀವ ವಯೋಮಾರ್ಗ ಏರಿಕೆಯಾಗುವುದಲ್ಲದೇ, ಆದು ಸಮುದಾಯದ ಮೇಲೂ ಧನಾತ್ಮಕ (ಲಾಭಕರ) ಪ್ರಭಾವ ಬೀರುವುದು. ಮಹಿಳಾ ಶಿಕ್ಷಣಕ್ಕೆ ಗಮನ ನೀಡದಿದ್ದರೆ, ಅಭಿವೃದ್ಧಿ ವೆಚ್ಚ ಅಧಿಕವಾಗುವುದು. ಶಿಕ್ಷಣದಲ್ಲಿನ ಲಿಂಗ ಅಂತರವನ್ನು ನಿವಾರಿಸದಿದ್ದರೆ, ಸಾಮಾಜಿಕ ಚಲಕಗಳಲ್ಲಿ ಅಪೇಕ್ಷಿಸಿ ಬೆಳವಣಿಗೆಗಳನ್ನು, ಆರ್ಥಿಕ ಬೆಳವಣಿಗೆಯ ಉನ್ನತ ಮಟ್ಟಗಳಲ್ಲಷ್ಟೇ ಸಾಧಿಸಬಹುದು (ಬಾಬು, ೨೦೦೫).

## ೨.೧.೪ ಶಿಕ್ಷಣ ವೆಚ್ಚಗಳು, ಲಾಭಗಳು ಮತ್ತು ಲಿಂಗ ವ್ಯತ್ಯಯಗಳು

ಮಹಿಳಾ ಶಿಕ್ಷಣವು ಮಹತ್ವದ್ದೆಂದಾದರೆ, ಏಕೆ ಪುರುಷರಿಗೆ ಹೋಲಿಸಿದಂತೆ ಮಹಿಳೆಯರ ಕಡಿಮೆ ಸಾಕ್ಷರರೂ, ಕಡಿಮೆ ಸುರಕ್ಷಿತರೂ ಆಗಿದ್ದಾರೆ? ಶಿಕ್ಷಣದಲ್ಲಿ ಲಿಂಗ ವ್ಯತ್ಯಾಸಗಳ ಅಸ್ತಿತ್ವದಲ್ಲಿವೆ ಏಕೆ? ಈ ಪ್ರಶ್ನೆಗಳಿಗೆ ಉತ್ತರಗಳನ್ನು ಹುಡುಕುವ ಸಂಶೋಧನೆ ಮಹತ್ವ ಪಡೆಯುತ್ತವೆ. ಶಿಕ್ಷಣದ ವೆಚ್ಚಗಳು ಮತ್ತು ಲಾಭಗಳು ಪುರುಷರು ಮತ್ತು ಮಹಿಳೆಯರ ಶಾಲೆಗೆ ಹೋಗುವುದರ ಮೇಲೆ ವಿಭಿನ್ನ ಪ್ರಭಾವವನ್ನು ಬೀರುವುದೇಕೆ? ಇವುಗಳ ತಂದೆ–ತಾಯಿಯರ ವ್ಯತ್ಯಾಸಗೊಳ್ಳುವುದೇಕೆ? ಈ ಪ್ರಶ್ನೆಗಳೂ ಅತ್ಯಂತ ಮಹತ್ವದ್ದಾಗಿವೆ.

ಶಿಕ್ಷಣದಿಂದ ದೊರಕುವ ಲಾಭಗಳು ವಿದ್ಯಾರ್ಥಿಗೆ (ವ್ಯಕ್ತಿಗೆ) ಹೋಗುವುವು. ಆದರೆ ಅನೇಕ ಸಂದರ್ಭಗಳಲ್ಲಿ ಪ್ರಾಥಮಿಕ ಹಂತದ ಶಿಕ್ಷಣದ ಕುರಿತ ಮಾತಾಪಿತೃಗಳ ದೃಷ್ಟಿಕೋನ ಅವರ ಅಭಿವೃದ್ಧಿಗೆ ಪೂರಕವಾಗಿಲ್ಲದಿರುವುದು ಮಹತ್ವದ ಅಂಶವಾಗಿದೆ. ಆದುದರಿಂದ ತಂದೆ–ತಾಯಿಗಳು ತಮ್ಮ ಹೆಣ್ಣು ಮತ್ತು ಗಂಡು ಮಕ್ಕಳ ಶಿಕ್ಷಣ ಕುರಿತು ವಿಭಿನ್ನ ದೃಷ್ಟಿಕೋನಗಳನ್ನು ತಳೆದಿರುವರು. ಕೆಲವು ಸಮಾಜಗಳ ಶಿಕ್ಷಣ, ಆಹಾರ ಹಂಚಿಕೆ ಅಥವಾ ಆಸ್ತಿ ವಿತರಣೆಗಳು ಗಂಡು ಮಕ್ಕಳ ಪರವಾಗಿರುವುದು. ಇಂಥ ನಡವಳಿಕೆಯ ಮೂಲಕ ಮಾತಾಪಿತೃಗಳು ಕೇವಲ ತಾರತಮ್ಯಗಳನ್ನಷ್ಟೇ ಮಾಡುತ್ತಿಲ್ಲ; ಅವರು ಕಾರ್ಮಿಕ ಪೇಟೆಯ ಪರಿಸ್ಥಿತಿಗಳು ಮತ್ತು ಸಂಪ್ರದಾಯಗಳಿಂದ ನಿರ್ಣಯಿಸಲ್ಪಟ್ಟ ನಿರೀಕ್ಷಿತ ಪ್ರತಿಫಲಗಳು ಹಾಗೂ ಬಡತನ ವಿಧಿಸುವ ಪ್ರತಿಬಂಧಕಗಳ ಬಗೆಗೆ ವೈಚಾರಿಕವಾಗಿಯೇ ಪ್ರತಿಕ್ರಿಯಿಸುತ್ತಿರುತ್ತಾರೆ. ಇದು ಪರಿಣಾಮಗಳನ್ನೇನೂ ಕಡಿಮೆ ಹಾನಿಕರವಾಗಿಲ್ಲ. ಹೆಣ್ಣು ಮಕ್ಕಳನ್ನು ಶಾಲೆಗೆ ಕಳುಹಿಸುವುದರಿಂದ ದೊರಕುವ ನಿರೀಕ್ಷಿತ ಫಲಗಳು ಅವರ ಶಿಕ್ಷಣದ ವೆಚ್ಚಗಳನ್ನು ಮೀರದಿದ್ದರೆ, ಆಗ ತಂದೆ–ತಾಯಿಯರಿಗೆ ಮಹಿಳಾ ಶಿಕ್ಷಣವು ಹೂಡಿಕೆಯಾಗಿ ಅನಾಕರ್ಷಕವಾಗುವುದು. ಇಂಥ ಸಂದರ್ಭದಲ್ಲಿ ಅಲ್ಪ ಪ್ರತಿಫಲ ದರಗಳು ಸ್ವೀಕಾರಾರ್ಹ ವಾಗುವವರೆಗೆ ಮಾತ್ರವೇ ತಂದೆ–ತಾಯಿ ಮಹಿಳಾ ಶಿಕ್ಷಣವನ್ನು ಸ್ವೀಕರಿಸುವರು.

## ೨.೧.೫ ಹಣಕಾಸು, ಅವಕಾಶ ಮತ್ತು ಮನೋವೈಜ್ಞಾನಿಕ ವೆಚ್ಚಗಳು

ಶಿಕ್ಷಣವು ಸಾರ್ವಜನಿಕವಾಗಿದ್ದು, ಶುಲ್ಕಗಳು ಉಚಿತವಾದರೂ, ಶಾಲಾ ಹಾಜರಾತಿಗೆ ಕುಟುಂಬ ಸಂಪನ್ಮೂಲಗಳೇ ಹೆಚ್ಚು ಬೇಕು. ಶಾಲೆಯ ಇತರ ಶುಲ್ಕಗಳು, ಕಲಿಕಾ ಸಾಮಾಗ್ರಿಗಳು, ಸಮವಸ್ತ್ರಗಳು ಸಾರಿಗೆ ಮತ್ತು ಊಟದ ಖರ್ಚು. ಈ ಅರ್ಥದಲ್ಲಿ ಮಕ್ಕಳ ಶಿಕ್ಷಣದ ಮೇಲಿನ ತಂದೆ-ತಾಯಿ ವೆಚ್ಚ ಅಪಾರವಾಗಿರುವುದು.

ನೈತಿಕ ಮತ್ತು ಸಾಮಾಜಿಕ ಕಾರಣಗಳಿಂದಾಗಿ ಹಾಗೂ ಸುರಕ್ಷೆಯ ಹಿತದೃಷ್ಟಿಯಿಂದ ದೂರದೂರುಗಳಿಗೆ ಹೆಣ್ಣು ಮಕ್ಕಳನ್ನು ಶಿಕ್ಷಣಕ್ಕಾಗಿ ಅನುದಿನವೂ ತಂದೆ-ತಾಯಿಯರು ಕಳುಹಿಸುವುದಿಲ್ಲ. ದೂರದ ಊರುಗಳಲ್ಲಿ ಹೆಣ್ಣು ಮಕ್ಕಳಿಗೆ ಶಿಕ್ಷಣ ನೀಡುವುದೆಂದರೆ ಅವರ ಊಟ ವಸತಿಯ ದುಬಾರಿ ವೆಚ್ಚಗಳನ್ನು ಭರಿಸಬೇಕಾಗುತ್ತದೆ. ಇದು ಎಲ್ಲಾ ತಂದೆ-ತಾಯಿಯರಿಗೂ ಸಾಧ್ಯವಾಗದ ಮಾತು. ಇದನ್ನೇ ನೈತಿಕ/ಮನೋಮೈಜ್ಞಾನಿಕ ವೆಚ್ಚಗಳೆಂದು ಕರೆಯಲಾಗುವುದು.

ಕೆಲವು ತಂದೆ-ತಾಯಿಯರಿಗೆ ತಮ್ಮ ಮಕ್ಕಳ ಶಿಕ್ಷಣದ ಅವಕಾಶಗಳನ್ನು ಪೂರೈಸಲು ಅಸಾಧ್ಯವಾಗಬಹುದು. ಈ ಅವಕಾಶ ವೆಚ್ಚಗಳು ದೇಶದಿಂದ ದೇಶಕ್ಕೆ ಮತ್ತು ಲಿಂಗಕ್ಕೆ ಅನುಸಾರವಾಗಿ ವ್ಯತ್ಯಾಸಗೊಳ್ಳುವುವು. ಬೋತ್ಸವಾನ, ಕೋಟೆ ಡಿಐವರ್, ಫಿಲಿಫೈನ್ಸ್‌ನ ಕೆಲವು ಭಾಗಗಳಲ್ಲಿ ಹುಡುಗರು ಮನೆಗೆಲಸವನ್ನು, ದನಕಾಯುವುದನ್ನು, ಉಳುಮೆಯನ್ನು ಹೆಚ್ಚಾಗಿ ಮಾಡುವರು. ಹೀಗಿದ್ದರೂ ಈ ದೇಶಗಳಲ್ಲಿ ಹೆಣ್ಣುಮಕ್ಕಳು ಹುಡುಗರಿಗಿಂತ ಹೆಚ್ಚು ಮನೆಗೆಲಸ ಮತ್ತು ಮಾರುಕಟ್ಟೆಯಲ್ಲಿ ಕೂಲಿ ಕೆಲಸ ಮಾಡುವರು. ಹೆಣ್ಣು ಮಕ್ಕಳು ಅಡುಗೆ ಮಾಡುವರು, ಮನೆ ಶುಚಿಗೊಳಿಸುವರು, ನೀರು ತರುವರು, ಪುಟ್ಟ ಮಕ್ಕಳನ್ನು ಲಾಲಿಸಿ ಪಾಲಿಸಲು ತಾಯಂದಿರಿಗೆ ನೆರವಾಗುವರು, ರೋಗಿಗಳಿಗೆ ಆರೈಕೆ ಮಾಡುವರು. ನೇಪಾಳ ಮತ್ತು ಜಾವಾ ದೇಶಗಳಲ್ಲಿ ಹುಡುಗರಿಗಿಂತ ಹುಡುಗಿಯರು ಮನೆವಾರ್ತೆ ಮತ್ತು ಕೂಲಿಕೆಲಸಗಳಲ್ಲಿ $^{1}/_{3}$ಕ್ಕೂ ಹೆಚ್ಚು ಕಾಲ ದುಡಿಯುವರು. ಕೆಲವೆಡೆ ಈ ವ್ಯತ್ಯಾಸವು ಶೇಕಡಾ ೮೫ಕ್ಕೂ ಹೆಚ್ಚಾಗಿದೆ. ಈ ಉದಾಹರಣೆಗಳು ಬಾಲ್ಯಾವಸ್ಥೆಯಲ್ಲೇ ಗಾಢವಾದ ಲಿಂಗ ತಾರತಮ್ಯಗಳು ಅಸ್ತಿತ್ವದಲ್ಲಿವೆ ಎಂಬುದನ್ನು ಸ್ಪಷ್ಟಪಡಿಸುವುವು. ಹೀಗಾಗಿ ಹೆಣ್ಣು ಮಕ್ಕಳು ಶಾಲೆಗೆ ಹೋದರೆ ದುಡಿಮೆ ಕಳೆದುಕೊಳ್ಳುವರು. ಮಕ್ಕಳ ಲಾಲನೆ ಪಾಲನೆ, ಗೃಹಕೃತ್ಯ ಕಲಿಕೆ, ಕಸೂತಿ ತರಬೇತಿ ಅವಕಾಶಗಳನ್ನು ಕಳೆದುಕೊಳ್ಳುವರೆಂದು ತಂದೆತಾಯಿಯರು ನಂಬುತ್ತಾರೆ. ವಯಸ್ಕರ ನಿರೀಕ್ಷಿತ ಉದ್ಯೋಗದ ನೆಲೆಯಲ್ಲಿ ಮೇಲ್ಕಂಡ ತರಬೇತಿ ಅವಕಾಶಗಳ ಮಹತ್ವವು ದೇಶದಿಂದ ದೇಶಕ್ಕೆ ಬದಲಾಗುವುದು. ಉದಾ: ತಮ್ಮ ತಾಯಂದಿರು ಕಲಿಸಿದ ವೃತ್ತಿ ಕೌಶಲ್ಯಗಳನ್ನು ಆಧರಿಸಿ ಕರಕುಶಲ

ಕೈಗಾರಿಕೆ ಅಥವಾ ಕೃಷಿಯನ್ನು ಹೆಣ್ಣುಮಕ್ಕಳು ಪ್ರವೇಶಿಸುವುದಾದರೆ, ಆಗ ಅವಕಾಶ ವೆಚ್ಚವು ಔಪಚಾರಿಕ ಶಾಲೆ ಹಾಜರಾತಿ ವೆಚ್ಚವನ್ನಲ್ಲದೇ, ಕಳೆದುಕೊಂಡ ಪರ್ಯಾಯ ತರಬೇತಿಯ ವೆಚ್ಚವನ್ನು ಒಳಗೊಳ್ಳಬೇಕು.

ಅಂತಿಮವಾಗಿ, ಹಣಕಾಸು ವೆಚ್ಚಗಳು ಶಾಲೆಯ ಅವಕಾಶ ವೆಚ್ಚಗಳನ್ನಲ್ಲದೆ, ಶಿಕ್ಷಣ ಪಡೆವ ಹೆಣ್ಣುಮಕ್ಕಳು ಕೆಲವು ಹಣ ರೂಪವಲ್ಲದ ಮನೋವೈಜ್ಞಾನಿಕ ವೆಚ್ಚಗಳನ್ನು ಭರಿಸಬೇಕಾಗುವುದು. ಕೆಲವು ಸಂದರ್ಭಗಳಲ್ಲಿ ಧರ್ಮ, ಸಾಮಾಜಿಕ-ಸಾಂಸ್ಕೃತಿಕ ಅಂಶಗಳು ತಂದೆ-ತಾಯಿಯರ ಆಯ್ಕೆಗಳ ಮೇಲೆ ಅದರ ಸಡಿಲಗೊಂಡ ನಡವಳಿಕೆಗಳ ಅಧಿಕ ವೆಚ್ಚವಿಧಿಸುವ ಮೂಲಕ ಪ್ರಭಾವಿಸುವುವು. ಇವು ಶಾಲೆಗೆ ಕಳುಹಿಸುವ ತೀರ್ಮಾನದ ಮೇಲೆ ಗಾಢ ಪ್ರಭಾವ ಬೀರುವುದು. ಮಹಿಳೆಯರನ್ನು ಸಾಮಾನ್ಯವಾಗಿ ಪ್ರತ್ಯೇಕಿಸಲಾದ ದೇಶಗಳ ಹುಡುಗಿಯರನ್ನು ಪುರುಷ ಅಧ್ಯಾಪಕರಿಲ್ಲದ ಅಥವಾ ಹುಡುಗರ ಸಹಶಿಕ್ಷಣವಿಲ್ಲದ ಶಾಲಾಕಾಲೇಜುಗಳಿಗೆ ಕಳುಹಿಸಲಾಗುವುದು. ಈ ಕಾಳಜಿಗಳು ಹುಡುಗಿಯರು ಋತುಮತಿಯಾಗರಾಗುವ ಸಂದರ್ಭಗಳಲ್ಲಿ ಹಿಂದಿಗಿಂತ ಹೆಚ್ಚಾಗಿರುವುವು. ಅಲ್ಲದೆ ಸುಶಿಕ್ಷಿತ ಹುಡುಗಿಯರು ಅತ್ಯುತ್ತಮ ಗೃಹಿಣಿಯರಾಗುವರೆ ಎಂಬ ಕುರಿತ ಅನುಮಾನ ಜನರಲ್ಲಿದೆ. ಹೀಗಾಗಿ ತಂದೆ-ತಾಯಿಯರಿಗೆ ಶಿಕ್ಷಣವು ಋಣಾತ್ಮಕ ಅಂಶವೆಂಬ ಅನುಮಾನ ಮೂಡಿಸುವ ಅಪಾಯವಿದೆ. ಅನೇಕ ಸಾಂಪ್ರದಾಯಿಕ ಸಮಾಜಗಳಲಿ ಸಾಕ್ಷರತೆ ಮೀರಿ ಮಹಿಳೆ ಶಿಕ್ಷಣ ಪಡೆದರೆ ಅದರಿಂದ ಆಕೆಯ ವಿವಾಹ ಸಂಭಾವ್ಯತೆಗಳಿಗೆ ಅಪಾಯವಿದೆ. ಏಕೆಂದರೆ ಹೆಚ್ಚು ಶಿಕ್ಷಣವು ಮಹಿಳೆಯರನ್ನು ಉತ್ತಮ ಪತ್ನಿಯರು ಮತ್ತು ತಾಯಂದಿರಾಗಲು ಬಿಡುವುದಿಲ್ಲ ಎಂಬ ಸಾಮಾಜಿಕ ಒತ್ತಡದೊಂದಿಗೆ ಮುಖಾಮುಖಿಯಾಗುವಂತೆ ಮಾಡುವುದು.

ಆರ್ಥಿಕಾಭಿವೃದ್ಧಿ ಮತ್ತು ಮಹಿಳೆಯರಿಗಾಗಿ ವಿಸ್ತರಿಸಲ್ಪಡುವ ಉದ್ಯೋಗಾವಕಾಶಗಳೊಂದಿಗೆ, ಸಾಂಪ್ರದಾಯಿಕ, ಸಾಮಾಜಿಕ ಸೂತ್ರಗಳೊಂದಿಗೆ ಕುಟುಂಬವು ಬದ್ಧವಾಗುವಿಕೆ ಹಾಗೂ ಬದಲಾಗುತ್ತಿರುವ ಪರಿಸ್ಥಿತಿಗಳ ಲಾಭ ಪಡೆವ ಅಪೇಕ್ಷೆ ನಡುವೆ ಸಂಘರ್ಷವೇರ್ಪಡುತ್ತದೆ. ಆಗ ಹುಟ್ಟಿಕೊಳ್ಳುವ ಪ್ರಶ್ನೆಗಳೆಂದರೆ – ಈ ಬದಲಾವಣೆಗಳಿಗೆ ಯಾವಾಗ ಮತ್ತು ಎಷ್ಟರಮಟ್ಟಿಗೆ ಜನರು ಪ್ರತಿಕ್ರಿಯಿಸುವರು? ವ್ಯಕ್ತಿಗತ ನಡವಳಿಕೆ ಮೇಲೆ ಸಾಮಾಜಿಕ, ಸಾಂಸ್ಕೃತಿಕ ಅಂಶಗಳು ಬೀರುವ ಪ್ರಭಾವವನ್ನು ಔಪಚಾರಿಕವಾಗಿ ಆರ್ಥಿಕ ತತ್ವವು ವಿವರಿಸುವುದಿಲ್ಲ. ಆದರೆ ಅದು ಆರ್ಥಿಕ ಬೆಳವಣಿಗೆಯ ಫಲವಾಗಿ ಏರ್ಪಡುವ ಆದಾಯಗಳ ಮತ್ತು ಬೆಲೆಗಳಲ್ಲಾಗುವ ಬದಲಾವಣೆಗಳೊಂದಿಗೆ ಆಗುವ ನಡವಳಿಕೆ ಹೊಂದಾಣಿಕೆಗಳನ್ನು ಊಹಿಸುತ್ತದೆ. ಉದಾ: ಆರ್ಥಿಕ ತತ್ವವು ಮಹಿಳಾ ಕೂಲಿ ಏರಿಕೆಯು ಮಹಿಳೆಯರ ಶಿಕ್ಷಣದ ಪ್ರತಿಫಲವನ್ನು ಏರಿಸುತ್ತದೆ. ಇದು ಹೆಣ್ಣುಮಕ್ಕಳ ಶಿಕ್ಷಣದಲ್ಲಿ ಮಾತಾಪಿತೃಗಳು ಹೂಡಿಕೆ ಹೆಚ್ಚಳಕ್ಕೆ ಪ್ರೇರಕವಾಗುವುದರ ಬಗೆಗೆ ಹೇಳುವುದು. ತಂದೆ-ತಾಯಿಯರ ಪ್ರತಿಕ್ರಿಯೆಯ ಪ್ರಮಾಣ ಮತ್ತು ವೇಗವು ಹೊಸ ಹೊಸ ಮಾಹಿತಿ ಪಡೆಯುವಿಕೆ ಮತ್ತು

ಶಿಕ್ಷಣದ ಬೇಡಿಕೆಯ ಬೆಲೆ ಮತ್ತು ಆದಾಯ ಸ್ಥಿತಿಸ್ಥಾಪಕತ್ವವನ್ನು ಅವಲಂಬಿಸುತ್ತದೆ. ಅಂದರೆ ಹೆಣ್ಣುಮಕ್ಕಳ ಶಿಕ್ಷಣ ಕುರಿತು ತಂದೆ-ತಾಯಿಗಳ ಒಲವನ್ನು ಆರ್ಥಿಕ ಪರಿಸರವೂ, ಆರ್ಥಿಕ ಪರಿಸರವನ್ನು ತಂದೆ-ತಾಯಿಗಳ ಒಲವೂ ನಿರ್ಧರಿಸುವುವು. ಹನ್ಸ್ (೨೦೧೦) ಅವರು ತಿಳಿಸುವಂತೆ, ಗಮನ ಸೆಳೆಯುವ ಒಂದು ಅಂಶವೆಂದರೆ, ಕುಟುಂಬ ಮಟ್ಟದ ಸಂಪನ್ಮೂಲ ಹಂಚಿಕೆಯಲ್ಲಿ ಸ್ತ್ರೀ-ಪುರುಷ ತಾರತಮ್ಯ: ಶಿಕ್ಷಣ, ಆರೋಗ್ಯ ಮತ್ತು ಅದರ ವೆಚ್ಚಗಳಲ್ಲಿ ಹುಡುಗರಿಗೆ ಹುಡುಗಿಯರಿಗಿಂತ ಹೆಚ್ಚು ಪಾಲು ಒದಗುತ್ತದೆ. ಇದು ಕೌಟುಂಬಿಕ ನಿರ್ಧಾರ ಕೈಗೊಳ್ಳುವಿಕೆ ಇನ್ನೂ ಸಂಕೀರ್ಣವಾಗಿರುವುದನ್ನು ಸ್ತ್ರೀ-ಪುರುಷ ವ್ಯತ್ಯಯಗಳು ಸುಸ್ಥಿತಿ, ಆರ್ಥಿಕ ದಕ್ಷತೆ ಮತ್ತು ಬೆಳವಣಿಗೆಗಳೊಂದಿಗೆ ಹೇಗೆ ಬೆಸೆದುಕೊಂಡಿವೆ ಎಂಬುದನ್ನು ಎತ್ತಿ ತೋರಿಸುತ್ತದೆ.

ಹುಡುಗರು ಮತ್ತು ಹುಡುಗಿಯರ ಶಿಕ್ಷಣದ ವೆಚ್ಚಗಳು ಏಕರೂಪವಾಗಿರುವಾಗಲೂ, ತಂದೆ-ತಾಯಿಗಳು ಹುಡುಗಿಯರನ್ನು ಮನೆಕೆಲಸಗಳಿಗೆ ಸೀಮಿತಗೊಳಿಸಿ, ತಮ್ಮ ಗಂಡುಮಕ್ಕಳನ್ನು ಶಾಲೆಗೆ ಕಳುಹಿಸಬಹುದು. ಹುಡುಗಿಯರನ್ನು ಶಾಲೆಗೆ ಕಳುಹಿಸುವುದರಿಂದ ಅವರ ತಂದೆತಾಯಿಗಳಿಗೆ, ಸ್ವಯಂ ಅವರಿಗೆ, ಅವರ ಭವಿಷ್ಯದ ಕುಟುಂಬಕ್ಕೆ ಮತ್ತು ಇಡೀ ಸಮಾಜಕ್ಕೆ ಲಾಭವಾಗುವುದರಿಂದ ತಿಳಿದಿದ್ದರೂ, ಹುಡುಗಿಯರಿಗಿಂತ ಹುಡುಗರನ್ನು ಸುಶಿಕ್ಷಿತರನ್ನಾಗಿಸುವುದರಿಂದ ಅಧಿಕ ಪ್ರತಿಫಲಗಳನ್ನು ಪಡೆಯಬಹುದೆನ್ನುವ ತಂದೆ-ತಾಯಿಯರ ನಿರೀಕ್ಷೆಗಳು, ಯಾವ ಮಕ್ಕಳನ್ನು ಶಾಲೆಗೆ ಕಳುಹಿಸಬೇಕೆಂಬ ನಿರ್ಣಯ ಮಾಡುವಂತೆ ತಂದೆ-ತಾಯಿಯರನ್ನು ಪ್ರೇರೆಪಿಸುವುವು (ಅಬೂಬಕ್ಕರ್, ೨೦೦೭).

ಹೆಣ್ಣು ಮಕ್ಕಳು ತಮ್ಮ ಭವಿಷ್ಯದ ಆದಾಯದ ಸ್ವಲ್ಪ ಭಾಗವನ್ನು ತಂದೆ-ತಾಯಿಗಳಿಗೆ ವರ್ಗಾಯಿಸದ ಹೊರತು ಅವರ ಶಿಕ್ಷಣದ ವೆಚ್ಚಗಳನ್ನು ತಂದೆತಾಯಿಗಳು ಭರಿಸುವುದರಿಂದ ತಮ್ಮ ಹೆಣ್ಣುಮಕ್ಕಳಿಗೆ ಶಿಕ್ಷಣ ನೀಡಲು ಯಾವುದೇ ಉತ್ತೇಜಕಗಳಿರುವುದಿಲ್ಲ. ಉದಾಹರಣೆಗೆ ಹೆಣ್ಣು ಮಕ್ಕಳು ಬೇಗ ವಿವಾಹಿತರಾಗಿ ತಮ್ಮ ಗಂಡನ ಮನೆಗೆ ತೆರಳಿದರೆ, ಅವರ ಶಿಕ್ಷಣವು ತಂದೆ-ತಾಯಿಗಳಿಗೆ ಹೆಚ್ಚು ಲಾಭ ತರುವುದಿಲ್ಲ. ಬಾಂಗ್ಲಾ ದೇಶದ ಗ್ರಾಮೀಣ ಮಹಿಳೆಯರ ಪೈಕಿ ಬಹುಪಾಲು ೧೭ ವರ್ಷಕ್ಕೆ ವಿವಾಹವಾಗುವರು. ಭಾರತದಲ್ಲಿ ಗ್ರಾಮೀಣ ಮಹಿಳೆಯರಲ್ಲಿ ಬಹುಪಾಲು ೧೯ ವರ್ಷಕ್ಕೆ ವಿವಾಹವಾಗಿಬಿಡುವರು. ಮಹಿಳೆಯರು ಬೇಗನೆ ವಿವಾಹವಾಗದೇ ಕಾರ್ಮಿಕ ಶಕ್ತಿಯಲ್ಲಿ ಸ್ವಲ್ಪ ಕಳೆದರೆ, ಅದರಿಂದ ಆದಾಯ ದೊರಕುತ್ತದೆ. ಈ ಆಕರ್ಷಣೆಯಿಂದ ತಂದೆ-ತಾಯಿಯವರು ಹೆಣ್ಣುಮಕ್ಕಳಿಗೆ ಹೆಚ್ಚು ಶಿಕ್ಷಣ ಕೊಡಲು ಒಪ್ಪುವರು. ಹಾಂಗ್‌ಕಾಂಗ್‌ನಲ್ಲಿ ತಂದೆ ತಾಯಿಗಳು ವೃದ್ಧಾಪ್ಯದ ಜವಾಬ್ದಾರಿ ಗಂಡುಮಕ್ಕಳದ್ದೇ ಆದರೂ ವಯಸ್ಕ ಹೆಣ್ಣುಮಕ್ಕಳು (೨೧ ವರ್ಷಕ್ಕೂ ಹೆಚ್ಚು) ವಿವಾಹಪೂರ್ವ ಅವಧಿಯಲ್ಲಿ ತಮ್ಮ ತಂದೆತಾಯಿಗಳಿಗೆ ಆರ್ಥಿಕವಾಗಿ ನೆರವಾಗುವರು. ಇಂಥ ಹೆಣ್ಣುಮಕ್ಕಳು ಉಳಿದವರಿಗಿಂತ ಹೆಚ್ಚು ಶಿಕ್ಷಣ ಪಡೆಯುವುದು ಕಂಡು ಬಂದಿದೆ.

ಒಟ್ಟು ಜನಸಂಖ್ಯೆಯ ಗಣನೀಯ ಪ್ರಮಾಣದಲ್ಲಿದ್ದರೂ, ಸ್ತ್ರೀಯರ ಆರ್ಥಿಕ ಶ್ರಮ ಭಾಗವಹಿಸುವಿಕೆಯ ಪ್ರಮಾಣ ಕೆಳಮಟ್ಟದಲ್ಲಿದೆ. ಶಿಕ್ಷಣವು ಸ್ತ್ರೀಯರು ತಮ್ಮ ಮನೆಗಳ ಹೊರಗೆ ಹೋಗಿ ದುಡಿಯಲು ಮುಖ್ಯ ಪ್ರೇರಕ ಶಕ್ತಿಯಾಗಿದೆ. ಆದರೆ ಇದು ಕೇವಲ ಗೃಹವಿಜ್ಞಾನ, ನರ್ಸಿಂಗ್ ಕೋರ್ಸ್‌ಗಳಿಗೆ ಸೀಮಿತಗೊಂಡಾಗ ಶಿಕ್ಷಣವು ತಾರತಮ್ಯದ ಒಂದು ಸಾಧನವಾಗುವ ಅಪಾಯ ಕಂಡುಬರುತ್ತದೆ (ಸರಿಖಾನಿ ಮತ್ತು ಯಶೋಧ, ೨೦೧೦).

ಕಡಿಮೆ ಶಿಕ್ಷಣ ಪಡೆದವರಿಗಿಂತ ಹೆಚ್ಚು ಶಿಕ್ಷಣ ಪಡೆದ ಮಹಿಳೆಯರು ಹೆಚ್ಚು ವೇತನದ ಕೆಲಸ ಪಡೆವರು. ಅಲ್ಲದೆ ಅವರು ಸಂಘಟಿತ ಕ್ಷೇತ್ರದಲ್ಲೇ ಉದ್ಯೋಗ ಪಡೆಯುವರು. ಆದರೆ ವಿವಾಹಿತ ಮಹಿಳೆಯರು ಕಾರ್ಮಿಕ ಪೇಟೆಯಿಂದ ಹಿಂದೆ ಬರುವರು. ಏಕೆಂದರೆ ಇವರ ಶಿಕ್ಷಣವು ಪ್ರಾಥಮಿಕ ಮಟ್ಟದಿಂದ ಮಾಧ್ಯವಿಕ ಮಟ್ಟದವರೆಗೆ ಏರಿಕೆಯಾಗುತ್ತದೆ.

ಗರ್ಭಧಾರಣೆ, ಮಗುವಿನ ಜನನ, ಮಕ್ಕಳ ಲಾಲನೆ-ಪಾಲನೆ ಕರ್ತವ್ಯಗಳು, ಮಹಿಳೆಯರನ್ನು ಗಣನೀಯ ಅವಧಿಗೆ ಅಥವಾ ಕೆಲವೊಮ್ಮೆ ಶಾಶ್ವತವಾಗಿ ಉದ್ಯೋಗದಿಂದ ಹೊರದೂಡುವುವು. ಅಲ್ಲದೆ, ಈ ಸ್ವರೂಪಗಳು ಉದ್ಯಮ ಪತಿಯ ಕೂಲಿ ತೀರ್ಮಾನಗಳ ಮೇಲೆ ಪ್ರಭಾವ ಬೀರುವುವು. ಹೀಗೆ ಪುರುಷರಿಗಿಂತ ಮಹಿಳೆಯರ ದುಡಿಮೆಗೆ ಕಡಿಮೆ ಮೌಲ್ಯ ಕಟ್ಟಲಾಗುತ್ತದೆ. ಆದರೆ ವಿವಾಹಿತ ಮಹಿಳೆಯರು ಕಾರ್ಮಿಕ ಪೇಟೆಯಿಂದ ಹಿಂದೆ ಸರಿಯಲು ಬೇರೊಂದು ಕಾರಣ ಕೂಡಾ ಇದೆ. ಶಿಕ್ಷಣದ ಹೆಚ್ಚಳವು ಮಾರುಕಟ್ಟೆಯೇತರ ಚಟುವಟಿಕೆಗಳಲ್ಲಿ ಮಹಿಳೆಯರ ಉತ್ಪತ್ತಿಯನ್ನು ವೃದ್ಧಿಸುವುದು. ಹೀಗಾಗಿ ಬಹಳ ಆಕರ್ಷಕವಾದ ಉದ್ಯೋಗಗಳು ಕುಟುಂಬದಿಂದ ಹೊರಗೆ ದೊರಕದಿದ್ದರೆ ಆಗ ಮಾಧ್ಯಮಿಕ ಶಿಕ್ಷಣವುಳ್ಳ ವಿವಾಹಿತ ಮಹಿಳೆಯರಿಗೆ ಮನೆಯೊಳಗೆ ಉಳಿಯುವುದೇ ಹೆಚ್ಚು ಆಕರ್ಷಕ ಆಯ್ಕೆಯಾಗಿ ತೋರುವುದು.

ಪುರುಷನಿಗಿಂತ ಮಹಿಳಾ ಶಿಕ್ಷಣವು ಕುಟುಂಬ ಕಲ್ಯಾಣದ ಮೇಲೆ ಅಪಾರ ಪ್ರಭಾವ ಬೀರುವುದು. ಜನಸಂಖ್ಯಾ ಶಾಸ್ತ್ರ, ಅರ್ಥಶಾಸ್ತ್ರ, ವೈದ್ಯಕೀಯ ವಿಜ್ಞಾನ ಮತ್ತು ಮಾನವ ಶಾಸ್ತ್ರೀಯ ಅಧ್ಯಯನಗಳು, ತಾಯಂದಿರ ಶಿಕ್ಷಣ ಮತ್ತು ಶಿಶುಗಳ ಮರಣದರ ಇಳಿತಾಯದ ನಡುವೆ ನಿಕಟ ಸಂಬಂಧವನ್ನು ಗುರುತಿಸಿವೆ. ಈ ಸಂಬಂಧವು ವಿಕಾಸಶೀಲ ದೇಶಗಳಲ್ಲಿ ಬಹಳ ಶಕ್ತಿಯುತವಾಗಿ ತೋರುತ್ತದೆ. ತಾಯಂದಿರ ಶಾಲಾ ಶಿಕ್ಷಣವು ೧ ವರ್ಷ ಹೆಚ್ಚಿದರೆ ಅದು ಶಿಶುಮರಣವನ್ನು ಶೇಕಡಾ ೫ರಿಂದ ೧೦ರಷ್ಟು ಕಡಿಮೆಗೊಳಿಸುವುದು.

ಹೆಚ್ಚು ಶಿಕ್ಷಣ ಪಡೆದ ತಾಯಂದಿರು ಉತ್ತಮ ಶುಚಿತ್ವ ಉತ್ತಮಗೊಂಡ ಪೌಷ್ಟಿಕಾಹಾರಗಳ ಆಚರಣೆಗಳು, ಕುಟುಂಬದ ಆಚರಣೆಗಳು ಕುಟುಂಬದ ಆರೋಗ್ಯ ಕುರಿತು ಹೆಚ್ಚು ಪರಿಣಾಮಕಾರಿ ಪಾತ್ರ

ವಹಿಸುವಿಕೆ ಸಾಧಿಸುವರು. ಶಿಕ್ಷಣವು ಆರೋಗ್ಯ ಪರಿಕರಗಳನ್ನು ಹೆಚ್ಚಾಗಿ ಬಳಸಲು ಉತ್ತೇಜಿಸುವುದೇ ಮತ್ತು ಇದು ಅವುಗಳ ಹೆಚ್ಚು ಪರಿಣಾಮಕಾರಿ ಬಳಕೆಯನ್ನು ಉತ್ತೇಜಿಸುವುದೇ ಅಥವಾ ಶಿಕ್ಷಣವು ಆರೋಗ್ಯ ಅವಘಡಗಳನ್ನು ನಿರ್ವಹಿಸಲು ಹೆಚ್ಚು ಸಾಮರ್ಥ್ಯ ನೀಡುವುದೇ ಅಥವಾ ತಾಯಿಗೆ ತನ್ನ ಮಗುವಿನ ಪರಿಸರವನ್ನು ಚೆನ್ನಾಗಿ ನಿರ್ವಹಿಸುವ ಸಾಮರ್ಥ್ಯ ನೀಡುವುದೇ? ಇದಕ್ಕೆ ಉತ್ತರ ಸಾಮಾನ್ಯವಾಗಿ ಹೌದು. ನೈಜೀರಿಯಾದ ತಾಯಂದಿರಿಗೆ ಶಿಕ್ಷಣವು ಸ್ಥಳೀಯ ಸಾರ್ವಜನಿಕ ಆರೋಗ್ಯ ಸೇವೆಗಳನ್ನು ಚೆನ್ನಾಗಿ ಬಳಸುವುದನ್ನು ಕಲಿಸಿತು. ಕೊಳವೆ ನೀರು ಪೂರೈಕೆ ಮತ್ತು ನೀರು ಬಳಸುವ ಕಕ್ಕಸುಗಳಿಲ್ಲದ ಪರಿಸರದಲ್ಲಿ ಫಿಲಿಫೈನ್ಸ್‌ನ ತಾಯಂದಿರಿಗೆ ಹೆಚ್ಚು ಶಿಕ್ಷಣವು ಮಕ್ಕಳ ಆರೋಗ್ಯ ಸಂರಕ್ಷಣೆಯನ್ನು ಕಲಿಸಿದೆ. ಸಾಮಾನ್ಯವಾಗಿ ಶಿಕ್ಷಣವು ಮನೆಯಲ್ಲಿ ಹೆಚ್ಚು ಪರಿಣಾಮಕಾರಿ ಪಾತ್ರ ನಿರ್ವಹಿಸುವಂತೆ ಅವಶ್ಯವಿರುವ ಜ್ಞಾನ ನೀಡುವುದು (ಕೃಷ್ಣಮೂರ್ತಿ, ೧೯೮೪).

ತಾಯಿಯ ಶಿಕ್ಷಣವು ಸ್ವಯಂ ಆಕೆಯ ಆರೋಗ್ಯವನ್ನು ಉತ್ತಮ ಪಡಿಸುತ್ತದೆ. ಇದಕ್ಕೆ ಒಂದು ಕಾರಣವೆಂದರೆ ಹೆಚ್ಚು ಶಿಕ್ಷಣವು ಮಕ್ಕಳನ್ನು ಹೆರುವುದನ್ನು ವಿಸ್ತರಿಸುವ, ಸಮಯ ನಿರ್ಧರಿಸುವ ಸಾಮರ್ಥ್ಯವನ್ನು ತಾಯಿಗೆ ನೀಡುತ್ತದೆ ಅಲ್ಲದೆ ಶಿಕ್ಷಣದಿಂದಾಗಿ ತಾಯಿಯ ಗರ್ಭಧಾರಣೆ ಮತ್ತು ಹೆರಿಗೆ ಸಮಯದಲ್ಲಿ ಆರೋಗ್ಯ ಸೇವೆಗಳನ್ನು ಉತ್ತಮವಾಗಿ ಬಳಸುವುದನ್ನು ಸಾಧ್ಯಗೊಳಿಸುವುದು. ಪದೇ ಪದೇ ಗರ್ಭಧರಿಸುವುದರಿಂದ ತಾಯಿಯ ಆರೋಗ್ಯ ಕ್ಷೀಣಿಸುವುದು. ಏಕೆಂದರೆ ಗರ್ಭವತಿಗೆ ಬೇಕಾದ ಹೆಚ್ಚು ಪೌಷ್ಟಿಕಾಹಾರಗಳು ಬಡವರ್ಗಗಳಲ್ಲಿ ದೊರಕುವುದಿಲ್ಲ. ಏಷ್ಯಾ ಮತ್ತು ಲ್ಯಾಟಿನ್ ಅಮೇರಿಕಾದ ಹೆಚ್ಚು ಶಿಕ್ಷಣ ಪಡೆದ ಮಹಿಳೆಯರಲ್ಲಿ ಅಧಿಕವಾಗಿ ಗರ್ಭನಿರೋಧಕಗಳನ್ನು ಬಳಸಲಾಗುತ್ತಿದೆ. ಹೀಗಾಗಿ ಈ ಮಹಿಳೆಯರ ಫಲವಂತಿಕೆ ದರಗಳು ಇಳಿತಾಯವಾಗಿದೆ. ಅದು ಉದ್ದೇಶಿಕ ಮಟ್ಟಗಳನ್ನು ತಲುಪುತ್ತದೆ. ಗಂಡನ ಶಿಕ್ಷಣಕ್ಕಿಂತ ಮಹಿಳೆಯ ಶಿಕ್ಷಣವು ಮೂರು ಪಟ್ಟು ಹೆಚ್ಚು ಋಣಾತ್ಮಕ ಪರಿಣಾಮವನ್ನು ಫಲವಂತಿಕೆ ಮೇಲೆ ಬೀರುವುದೆಂಬುದನ್ನು ಜನಸಂಖ್ಯಾ ಯೋಜನಾಕಾರರು ತಿಳಿಯಬೇಕು.

ಇದೇ ರೀತಿ ತಾಯಂದಿರ ಶಿಕ್ಷಣವು, ಆಕೆಯ ಮಕ್ಕಳ ವಿಶೇಷವಾಗಿ ಹೆಣ್ಮಕ್ಕಳ ಸಾಧನೆಯನ್ನು ಹೆಚ್ಚಿಸುತ್ತದೆ ತಂದೆಯೂ ಶಿಕ್ಷಣವು ಆದಾಯ ಪರಿಣಾಮ ಬೀರುವುದು. ಕೈರೋದ ಸಾರ್ವಜನಿಕ ಶಿಕ್ಷಣ ವ್ಯವಸ್ಥೆ ಕುರಿತ ಅಧ್ಯಯನವೊಂದರ ಪ್ರಕಾರ ವಿದ್ಯಾರ್ಥಿಗಳ ಸ್ವನಂಬಿಕೆ ವ್ಯತ್ಯಾಸಗಳು ತಾಯಂದಿರ ಶಿಕ್ಷಣ ಮಟ್ಟದೊಂದಿಗೆ ಬೆಸೆದುಕೊಂಡಿದೆ. ತಾಯಿಯ ಔಪಚಾರಿಕ ಶಾಲೆ ಹೆಚ್ಚೆಚ್ಚು ಇದ್ದಷ್ಟು ಆಕೆಯು ತನ್ನ ಹೆಣ್ಣು ಮಕ್ಕಳಿಗೆ ಹೆಚ್ಚಿಗೆ ಆತ್ಮಗೌರವ ಮತ್ತು ಸ್ವವಿಶ್ವಾಸ ಕಲಿಸುವಳು. ಅಲ್ಲದೆ ಕಡಿಮೆ ಶಿಕ್ಷಣವುಳ್ಳ ತಾಯಂದಿರಿಗಿಂತ

ಹೆಚ್ಚು ಶಿಕ್ಷಣವುಳ್ಳ ತಾಯಂದಿರು ತಮ್ಮ ಹೆಣ್ಣು ಮಕ್ಕಳಿಂದ ಹೆಚ್ಚು ಮಾನದಂಡಗಳನ್ನು ಮತ್ತು ನಿರೀಕ್ಷೆಗಳನ್ನು ಹೊಂದಿರುವರು.

ಅಂತಿಮವಾಗಿ, ಶಿಕ್ಷಣವು ಮಹಿಳೆಯರು ತಮ್ಮ ಹಕ್ಕುಗಳನ್ನು ಮತ್ತು ಜವಾಬ್ದಾರಿಗಳನ್ನು ಚಲಾಯಿಸುವ, ನಿರ್ವಹಿಸುವ ಸಾಮರ್ಥ್ಯವನ್ನು ವೃದ್ಧಿಸುವುದು. ಭೂಮಾಲೀಕತ್ವದ ಹಕ್ಕು ಅನಕ್ಷರತೆಯ ತೊಡಕುಗಳಿಂದ ಕ್ಷೀಣಿಸಬಹುದು. ಮಹಿಳೆಯರು ಸಮಕಾಲೀನ ವಿಷಯಗಳನ್ನು ತಿಳಿಯದಿದ್ದಾರೆ. ಮತದಾನ ಹಕ್ಕಿಗೆ ಅರ್ಥವಿರುವುದಿಲ್ಲ. ಕುಟುಂಬದೊಳಗೆ ಅಥವಾ ಬೀದಿಗಳಲ್ಲಿನ ಮಹಿಳೆ ವಿರುದ್ಧದ ಹಿಂಸೆಯು ಕೇವಲ ಬಡತನದೊಂದಿಗೆ ಬೆಸೆದುಕೊಂಡಿಲ್ಲ. ಅದು ಅನಕ್ಷರತೆಯೊಂದಿಗೂ ಸಂಬಂಧ ಪಡೆದಿದೆ. ಇದು ಮಹಿಳೆಯರು ತಮ್ಮ ಹಕ್ಕುಗಳನ್ನು ಚಲಾಯಿಸಲು ಅಡ್ಡಿಪಡಿಸುವುದು ಮತ್ತು ಕಾನೂನಿನ ಪ್ರಕಾರ ನೆರವು ಪಡೆದು ಸಂರಕ್ಷಿಸಿಕೊಳ್ಳಲೂ ಅನಕ್ಷರತೆ ತೊಡಕಾಗುವುದು. ಈ ಲಾಭಗಳೂ ಕೂಡಾ ಮಹಿಳೆಗೆ ಮುಖ್ಯವಾದವುಗಳೇ ಆರ್ಥಿಕ ಮತ್ತು ಕಲ್ಯಾಣ ಲಾಭಗಳಂತೆ (ಅನ್ನಪೂರ್ಣೇಶ್ವರಿ, ೨೦೦೩)

## ೨.೩ ಮಹಿಳಾ ಶಿಕ್ಷಣವನ್ನು ಉತ್ತೇಜಿಸಲು ಕ್ರಮಗಳು

- ಶಾಲಾ ಕಾಲೇಜುಗಳ ಪ್ರವೇಶಾತಿಯನ್ನು ವಿಸ್ತರಿಸುವುದು
- ಸಾಂಸ್ಕೃತಿಕವಾಗಿ ಸಮಂಜಸವಾದ ಸೌಲಭ್ಯಗಳನ್ನು ಕಲ್ಪಿಸುವುದು
- ಮಹಿಳಾ ಶಿಕ್ಷಕರನ್ನು ನೇಮಿಸುವುದು
- ಪ್ರತ್ಯಕ್ಷ ವೆಚ್ಚಗಳನ್ನು ಕಡಿಮೆಗೊಳಿಸುವುದು ಸಮವಸ್ತ್ರಗಳ ವೆಚ್ಚ ಕಡಿಮೆಗೊಳಿಸುವುದು, ಶಿಷ್ಯವೇತನ ನೀಡಿದೆ
- ಅವಕಾಶ ವೆಚ್ಚಗಳನ್ನು ಕಡಿಮೆಗೊಳಿಸುವುದು. ಹಗಲು ಆರೈಕೆ ಕೇಂದ್ರಗಳ ಸ್ಥಾಪನೆ
- ಗೃಹ ತಂತ್ರಜ್ಞಾನವನ್ನು ಸುಧಾರಿಸುವುದು
- ಬದಲಾಗುವ ಶಾಲಾ ವೇಳಾಪಟ್ಟಿಗಳನ್ನು ಅಳವಡಿಸಿಕೊಳ್ಳುವುದು
- ಔಪಚಾರಿಕ ಶಾಲಾ ಶಿಕ್ಷಣಕ್ಕೆ ಪರ್ಯಾಯಗಳನ್ನು ಕಲ್ಪಿಸುವುದು
- ಶಿಕ್ಷಣದ ಲಾಭಗಳನ್ನು ಹೆಚ್ಚಿಸುವುದು – ಸಮುದಾಯಕ್ಕೆ ಹೆಚ್ಚು ಮಾಹಿತಿ ನೀಡಿಕೆ
- ಶಾಲಾ ಊಟದ ಕಾರ್ಯಕ್ರಮಗಳನ್ನು ಏರ್ಪಡಿಸುವುದು
- ಅಸಾಂಪ್ರದಾಯಿಕ ಉದ್ಯೋಗಕ್ಕಾಗಿ ಮಹಿಳೆಯರನ್ನು ತರಬೇತಿ ಗೊಳಿಸುವುದು
- ಲಿಂಗ–ತಟಸ್ಥ ಕಲಿಕೆ ಶಿಕ್ಷಣ ಕ್ರಮವನ್ನು ಖಾತ್ರಿಪಡಿಸುವುದು
- ಬಡತನ ನಿರ್ಮೂಲನಗೊಳಿಸುವುದು

- ಶೈಕ್ಷಣಿಕ ಹಸ್ತಕ್ಷೇಪಗಳನ್ನು ಹೆಚ್ಚು ಯಶಸ್ವಿಗೊಳಿಸುವುದು
- ಶೈಕ್ಷಣಿಕ ಅಭಿವೃದ್ಧಿ ವಿಧಾನಗಳು ಸಮಂಜಸವೂ ಮತ್ತು ಸಾಮರ್ಥ್ಯಕ್ಕನುಗುಣವಾಗಿಯೂ ಇರಬೇಕು (ಮುಗಳಿ, ೧೯೭೨).

## ೨.೪ ಮಹಿಳಾ ಶಿಕ್ಷಣ ಹಿಂದುಳಿದಿರುವುದಕ್ಕೆ ಕಾರಣಗಳು

ಶಿಕ್ಷಣ ಸಂಸ್ಥೆಯು ಸಾಮಾಜಿಕ ಸಂರಚನೆಯ ಪ್ರಧಾನ ಸಂಸ್ಥೆಯಾಗಿದೆ. ಆದ್ದರಿಂದ ಸ್ತ್ರೀಪುರುಷರ ಬೌದ್ಧಿಕ ಬೆಳವಣಿಗೆ, ಸೃಜನಶೀಲತೆ, ಸಂವಹನ ಶಕ್ತಿಯನ್ನು ಅದು ಸಮಾನವಾಗಿ ನೀಡಬೇಕಾಗುತ್ತದೆ. ಕೌಟುಂಬಿಕ, ಆರ್ಥಿಕ, ಸಾಮಾಜಿಕ, ರಾಜಕೀಯ ನೆಲೆಗಳಲ್ಲಿನ ಪಕ್ಷಪಾತದ ಧೋರಣೆಗಳಿಂದ ಮಹಿಳಾ ಶಿಕ್ಷಣ ನಿರೀಕ್ಷಿತ ವೇಗದಲ್ಲಿ ಮುಂದುವರಿಯುತ್ತಿಲ್ಲ.

**ಕೌಟುಂಬಿಕ ಸಮಸ್ಯೆ:** ಶಿಕ್ಷಣ ಕುರಿತ ಲಿಂಗ ತಾರತಮ್ಯ ಹೆಣ್ಣು ಮಗು ಹುಟ್ಟಿದಂದಿನಿಂದಲೇ ಪ್ರಾರಂಭವಾಗುತ್ತದೆ. ಗಂಡುಮಕ್ಕಳಿಗೆ ಅಕ್ಷರಾಭ್ಯಾಸವೆಂಬ ಸಂಸ್ಕಾರದೊಂದಿಗೆ ಶಿಕ್ಷಣದ ಸೌಲಭ್ಯ ಪ್ರಾರಂಭವಾಗುತ್ತದೆ. ಆದರೆ ಹೆಣ್ಣುಮಕ್ಕಳಿಗೆ ವಿವಾಹವಾಗಲು ತಕ್ಕಷ್ಟು ವಿದ್ಯಾಭ್ಯಾಸ, ಕಲೆ, ಗೃಹಕೃತ್ಯಗಳು ಸಾಕು ಎಂದು ಪೋಷಕರು ಭಾವಿಸುತ್ತಾರೆ. ಆದ್ದರಿಂದ ಶಾಲೆಗೆ ಸೇರಿಸುವಾಗ, ಮುಂದುವರಿಸಲು ಹಾಗೂ ಹೆಚ್ಚಿನ ಶಿಕ್ಷಣ ಕೊಡಿಸಲು ಹಿಂದೆಗೆಯುತ್ತಾರೆ. ಲಿಂಗಭೇದದ ಕಾರಣದಿಂದಾಗಿ ಶಾಲೆಗೆ ಹೋಗಬೇಕಾದ ಹುಡುಗಿ ತನ್ನ ಅಣ್ಣ ಅಥವಾ ತಮ್ಮನಿಗೆ ತನ್ನ ಅವಕಾಶವನ್ನು ಬಿಟ್ಟುಕೊಡುವ ಪರಿಸ್ಥಿತಿ ಇರುತ್ತದೆ. ಅಷ್ಟೇ ಅಲ್ಲ, ಪ್ರಾರಂಭದಿಂದಲೇ ಹುಡುಗಿಗೆ 'ಮನೆ ಆಟದ' ಮಾದರಿ ಪಾತ್ರವಾಗಿ ಮಾಡಿ ಅಡುಗೆ, ಮನೆಕೆಲಸ ಕಲಿಸುತ್ತಾರೆ. ಹುಡುಗರಿಗೆ ಹೊರಗೆ ನಡೆದಾಡುವ ಜವಾಬ್ದಾರಿಗಳನ್ನು ಸೂಚಿಸುವಂತೆ ಬೆಳೆಸುತ್ತಾರೆ. ಕುಟುಂಬದ ಪೂಜೆ, ಸಂಪ್ರದಾಯಗಳಲ್ಲಿ ಹುಡುಗಿಯರನ್ನು ತೊಡಗಿಸಿ, ಆಕೆ ತನ್ನ ಪಾತ್ರ ಬೌದ್ಧಿಕ ಬೆಳವಣಿಗೆಯಲ್ಲ. ಮನೆ ಹಾಗೊ ಕುಟುಂಬದ ಸದಸ್ಯರನ್ನು ತೃಪ್ತಿಪಡಿಸುವಷ್ಟು ಮಾತ್ರ ಎಂದು ಭಾವಿಸುವಂತೆ ಮಾಡುತ್ತಾರೆ. ಹೀಗಾಗಿ ಹುಡುಗಿಯರಿಗೆ ಶಾಲೆಯ ಆಕರ್ಷಣೆಯೇ ಇಲ್ಲವಾಗುತ್ತದೆ.

**ಆರ್ಥಿಕ ಸಮಸ್ಯೆ:** ಹಿಂದೆಗಿಂತಲೂ ಈಗ ಮಹಿಳೆಯರಿಗೆ ಶಿಕ್ಷಣದ ಅವಕಾಶಗಳು ಹೆಚ್ಚಾಗಿದೆ. ಆದರೆ ಕುಟುಂಬದ ಆರ್ಥಿಕ ಪರಿಸ್ಥಿತಿ, ಸಂಪನ್ಮೂಲಗಳ ಬಳಕೆ ಪ್ರಶ್ನೆ ಬಂದಾಗ ಪುರುಷ ನಿರ್ಮಿತ ವ್ಯವಸ್ಥೆ ಮಹಿಳೆಯರನ್ನು ಕಡೆಗಣಿಸುತ್ತದೆ. ಹೆಣ್ಣು ಮಕ್ಕಳನ್ನು ಶಾಲೆಗೆ ಕಳುಹಿಸಲು ಇಚ್ಛಿಸುವುದಿಲ್ಲ. ಕುಟುಂಬಕ್ಕೆ ಜೀವನಾಧಾರ ಕಲ್ಪಿಸುವ ಗಂಡು ಮಗನನ್ನು ಇರುವ ಸ್ವತ್ತನ್ನೂ ಮಾರಿ ಅಥವಾ ಒತ್ತೆಯಿಟ್ಟು ಓದಿಸಬಯಸುತ್ತಾರೆ. ಅಷ್ಟೇ ಅಲ್ಲ, ಹುಡುಗರಿಗಿಂತ ಚುರುಕಾದ ಬುದ್ಧಿವಂತ ಹೆಣ್ಣು ಮಕ್ಕಳನ್ನು ಕೂಡ

ವಿದ್ಯಾಭ್ಯಾಸ ಮುಂದುವರಿಸಲು ಅಥವಾ ಉನ್ನತ ಶಿಕ್ಷಣ ಪಡೆಯಲು ಪ್ರೋತ್ಸಾಹಿಸುವುದಿಲ್ಲ. ಜೊತೆಗೆ ಹುಡುಗಿಯರನ್ನು ಹೆಚ್ಚು ಹಣ ವೆಚ್ಚಮಾಡಿ ಶಿಕ್ಷಣ ಕೊಡಿಸಿದರೂ ಅವರು ಪರರ ಮನೆಗೆ ದುಡಿದು ಹಣಕೊಡುತ್ತಾರೆ. ಇನ್ನು ಹುಡುಗಿಯರ ಪದವಿಗೆ ತಕ್ಕ ಅಥವಾ ಇನ್ನೂ ಹೆಚ್ಚಿನ ಉನ್ನತ ವ್ಯಾಸಂಗ ಮಾಡಿದವರನ್ನು ಹೆಚ್ಚು ವರದಕ್ಷಿಣೆ ಕೊಟ್ಟು ವಿವಾಹ ಮಾಡಬೇಕು. ಇಂಥ ಆಲೋಚನೆಗಳು ಪೋಷಕರನ್ನು ನಿರ್ಬಂಧಿಸುತ್ತದೆ. ಭಾರತದ ದುರ್ಬಲ ಆರ್ಥಿಕ ವ್ಯವಸ್ಥೆಯಿಂದಾಗಿ ಉದ್ಯೋಗಗಳ ಅಭಾವವೂ ಹೆಚ್ಚಾಗಿದೆ.

**ಸಾಮಾಜಿಕ ಸಮಸ್ಯೆ:** ಪಿತೃ ಪ್ರಧಾನ ವ್ಯವಸ್ಥೆ ಕುಟುಂಬ, ವಿವಾಹ ಸಂಸ್ಥೆಗಳಲ್ಲಿ ಸ್ತ್ರೀಯರನ್ನು ಕಟ್ಟಿಹಾಕಲು ಕಟ್ಟುನಿಟ್ಟಾದ ನಿಯಮಗಳನ್ನು ರೂಪಿಸಿದೆ. ಸಂಗಾತಿಯಾಗಿದ್ದ ಸ್ತ್ರೀ ವ್ಯಕ್ತಿಯನ್ನು ಗುಲಾಮಳನ್ನಾಗಿ ಮಾಡಿಕೊಂಡು ವಿಜೃಂಭಿಸಿದ ಪುರುಷನು ತಾನೇ ಶಕ್ತಿವಂತನೆಂದು ಸಾರಲು ಸ್ತ್ರೀಯನ್ನು ನಿಯಂತ್ರಿಸಿದ್ದರು. ಗೊಂಬೆಗಳನ್ನು ಕೊಟ್ಟು ಆಟವಾಡಿಸಿ, ಗೃಹಿಣಿಯ, ಗೃಹಬಂಧಿತ್ವದ ಹಾಗೂ ಗೃಹಿಣಿತ್ವದ ಮೂಲಕ ಸ್ತ್ರೀಯರ ಅಸ್ಮಿತೆಯನ್ನು ಅಸ್ತಿತ್ವವನ್ನು ಹತ್ತಿಕ್ಕುವ ತಂತ್ರಗಳು ಲೆಕ್ಕವಿಲ್ಲದಷ್ಟು, ತಾಯ್ತನವನ್ನು ವೈಭವೀಕರಿಸಿ ಅವಳ ಆಲೋಚನಾಲೋಕವನ್ನು ಸ್ಥಗಿತಗೊಳಿಸಿ ತನ್ಮೂಲಕ ಚಲನಶೀಲತೆಗೆ ತಡೆಯೊಡ್ಡಲಾಯಿತು. ಅನಂತರ ವಿವಾಹವೆಂಬ ಉರುಳು ನಿಯಮಗಳಿಂದ ಸುತ್ತಿ ಸ್ತ್ರೀಯರ ಲೈಂಗಿಕತೆಯನ್ನು ನಿರ್ಭಂಧಿಸಲಾಯಿತು. ಎಲ್ಲ ಬಗೆಯ ಮುಕ್ತ ಲೈಂಗಿಕತೆಯಿಂದ ಪುರುಷ ತನ್ನ ಪೌರುಷವನ್ನು ಸಾರುವ ಹೊತ್ತಿನಲ್ಲಿ, ತನ್ನನ್ನು ಗೇಲಿ ಮಾಡಬಹುದು. ಅಥವಾ ತನ್ನ ಕೈಯಿಂದ ನುಣುಚಿಕೊಂಡು ತಪ್ಪಿ ಹೆರರ ಪಾಲಾಗಬಹುದೆಂಬ ಭೀತಿಯಿಂದ ಹೆಣ್ಣನ್ನು ಸಂಕೋಲೆಯಲ್ಲಿ ಬಂಧಿಸಿದ. "ವಿವಾಹ ನಿಯಮಗಳಡಿ ಆರ್ಥಿಕ ದಿಗ್ಬಂಧನ, ಲೈಂಗಿಕತೆಯ ದಿಗ್ಬಂಧನ ಹಾಗೂ ಗೃಹ ದಿಗ್ಬಂಧನ ಸೆರೆಯಾಗಿ ಹೋದ ಹೆಣ್ಣಿನ ಬದುಕು ಸಂಪೂರ್ಣವಾಗಿ ಪುರುಷಾಧೀನವಾಯಿತು."

**ರಾಜಕೀಯ ಸಮಸ್ಯೆ:** ಅಧಿಕಾರವಿರುವವರು ಅಧಿಕಾರವಿಲ್ಲದವರ ಮೇಲೆ ದಬ್ಬಾಳಿಕೆ ನಡೆಸುವುದು, ಅದಕ್ಕೆ ತಂತ್ರಗಳನ್ನು ರೂಪಿಸುವುದೇ ರಾಜಕೀಯ, ಒಂದು ಗುಂಪು ಮತ್ತೊಂದು ಗುಂಪಿನ ಮೇಲೆ, ಒಬ್ಬ ವ್ಯಕ್ತಿ ಮತ್ತೊಬ್ಬ ವ್ಯಕ್ತಿಯ ಮೇಲೆ ನಿಯಂತ್ರಣ ಹೊಂದಿರುವುದನ್ನು ರಾಜಕಾರಣ ವ್ಯಾಖ್ಯಾನ ಮಾಡುತ್ತದೆ. ಇನ್ನು ಸ್ತ್ರೀಯರ ಮಟ್ಟಿಗೆ ಹೇಳುವುದಾದರೆ ಲೈಂಗಿಕ ರಾಜಕಾರಣವೆಂದರೆ, ಲೈಂಗಿಕ ವ್ಯತ್ಯಾಸದ ಕಾರಣದಿಂದಲೇ ಇಬ್ಬರು ವ್ಯಕ್ತಿಗಳು ಪರಸ್ಪರ ಅಧಿಕಾರ ಚಲಾಯಿಸುವುದು ಎನ್ನಬಹುದು. ಇದರಿಂದ ಅಧಿಕಾರ ನಡೆಸುವ ಪುರುಷವರ್ಗ ಅಧೀನರಾಗದ ಸ್ತ್ರೀವರ್ಗವನ್ನು ಮಾನಸಿಕ, ದೈಹಿಕ ಒತ್ತಡವು ಗುರಿಮಾಡುತ್ತದೆ. ಕೇಟ್ ಮೆಲೆಟ್ ಎಂಬ ಸ್ತ್ರೀವಾದಿ ಲೇಖಕಿ 'ಲೈಂಗಿಕ ರಾಜಕಾರಣವು ಲೈಂಗಿಕ ಯಜಮಾನಿಕೆಯ ಅಂಶವನ್ನು ಒಳಗೊಂಡಿದ್ದು ಅದು ಮೂಲಭೂತವಾದ ಅಧಿಕಾರದ ಪರಿಕಲ್ಪನೆ ಎಂದಿದ್ದಾಳೆ. ಪಿತೃರೂಪಿ ಸಂಸ್ಕೃತಿಯಲ್ಲಿ

ಪುರುಷನನ್ನು ಉನ್ನತ ದರ್ಜೆಯವನೆಂದೂ ಸ್ತ್ರೀಯನ್ನು ಕೆಳದರ್ಜೆಯವಳೆಂದೂ ಅಂಗೀಕರಿಸಲಾಗಿದೆ. ಇದನ್ನು ಶಿಕ್ಷಣಾವಕಾಶದಲ್ಲಿ ಕೂಡ ಗುರುತಿಸಬಹುದು. ಪುರುಷರಿಗೆ ಉನ್ನತ ಶಿಕ್ಷಣಾವಕಾಶ ಹಾಗೂ ಬಯಸಿದ ಶಿಕ್ಷಣ ಒದಗಿಸುವ ವ್ಯವಸ್ಥೆ ಜೈವಿಕವಾಗಿ ದುರ್ಬಲೆಯೆಂದು ಕಡೆಗಣಿಸಿ ಕೆಲವೊಂದು ಉನ್ನತ ಜ್ಞಾನ ಶಿಸ್ತುಗಳನ್ನು ಮಹಿಳೆಯರಿಗೆ ಮುಚ್ಚಿ ಹಾಕಿದ್ದಿತು. ಐಎಎಸ್, ಐಪಿಎಸ್ ಹಾಗೂ ಐಎನ್‌ಎಗಳಂಥ ಪರೀಕ್ಷೆಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರಿಗೆ ಆಯ್ಕೆ ನೀಡುವುದಿಲ್ಲ. ಆದರೆ ಈಗಿನ ಬಾಹ್ಯಕಾಶ ವಿಜ್ಞಾನ ಸಹಿತ ಎಲ್ಲ ಜ್ಞಾನಶಾಖೆಗಳಲ್ಲಿ, ದೈಹಿಕ ಬೌದ್ಧಿಕ ಕಸರತ್ತುಗಳಲ್ಲಿ ಮಹಿಳೆಯರು ದಾಂಗುಡಿಯಿಡುತ್ತಿದ್ದಾರೆ. ಇದನ್ನು ತಡೆಗಟ್ಟಲು ಮತನಿಧಿಗಳನ್ನು ತಮ್ಮ ಬುಟ್ಟಿಗೆ ಹಾಕಿಕೊಳ್ಳಲು ಮಹಿಳೆಯನ್ನು ಅಜ್ಞಾನದಲ್ಲಿ ಇರಿಸಲು ಪ್ರಯತ್ನಿಸಲಾಗುತ್ತಿದೆ (ಜ್ಯೋತಿ, ೨೦೦೭).

## ೨.೫ ಭಾರತದಲ್ಲಿ ಮಹಿಳಾ ಶಿಕ್ಷಣ

ಭಾರತವು ಕಳೆದ ೫೦ ವರ್ಷಗಳಿಂದೀಚೆಗೆ (೧೯೫೧ರಿಂದ) ಸ್ವತಂತ್ರವಾಗಿ ಆಧುನಿಕ ಆರ್ಥಿಕಾಭಿವೃದ್ಧಿ ಕೈಗೊಂಡಿದೆ. ಹೀಗಾಗಿ ಭಾರತವು ಒಂದು ಅಲ್ಪಾದಾಯದ, ಅಧಿಕ ಜನಸಂಖ್ಯೆಯ ಮಂದಗತಿಯಲ್ಲಿ ಬೆಳೆಯುತ್ತಿರುವ ವಿಕಾಸಶೀಲ ಆರ್ಥಿಕತೆ ಹೊಂದಿದೆ. ಭಾರತೀಯ ಸಮಾಜವು ಮಂದಗತಿಯ ಆಧುನೀಕರಣದಿಂದ ಕೂಡಿದೆ. ಆದುದರಿಂದ ಭಾರತೀಯ ಸಮಾಜವು ಇನ್ನೂ ಅವೈಚಾರಿಕ ಸಂಪ್ರದಾಯಗಳ, ಕುರುಡು ನಂಬಿಕೆಗಳ ಪುರುಷ ಪೂರ್ವಾಗ್ರಹಗಳಿಂದ ಪೂರ್ಣವಾಗಿ ಮುಕ್ತಗೊಂಡಿಲ್ಲ. ಭಾರತವು ಅಪೂರ್ಣಾವೃದ್ಧಿ ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಹಿಂದುಳಿದ ರಾಷ್ಟ್ರವಾಗಿದೆ.

ಮೇಲ್ಕಂಡ ಒಟ್ಟು ಅಪೂರ್ಣಾಭಿವೃದ್ಧಿ, ಸಂದರ್ಭದಲ್ಲಿ ಭಾರತೀಯ ಮಹಿಳೆಯರ ಸಮಾನತೆ ಹೋರಾಟದ ಪ್ರಶ್ನೆಗಳಲ್ಲಿ ನೋಡಬೇಕು. ಶಿಕ್ಷಣದ ಲಿಂಗ ಅಸಮಾನತೆ ಅಂಥ ಒಂದು ಲಿಂಗ ಸಮತೆ ಪ್ರಶ್ನೆಯಾಗಿದೆ. ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ಮಹಿಳಾ ಶಿಕ್ಷಣವನ್ನು ಸಾರ್ವತ್ರಿಕವಾಗಿ ಮಾನ್ಯ ಮಾಡಿರಲಿಲ್ಲ. ಭಾರತೀಯ ಧಾರ್ಮಿಕ, ಸಾಂಸ್ಕೃತಿಕ ಮತ್ತು ಸಾಮಾಜಿಕ ನಂಬಿಕೆಗಳು ಮತ್ತು ಮೌಲ್ಯಗಳು ಹಾಗೂ ಆಚರಣೆಗಳು ಮಹಿಳೆಯನ್ನು ಶಿಕ್ಷಣದಿಂದ ದೂರವೇ ಇಟ್ಟಿದ್ದವು. ಮಹಿಳೆ ಮತ್ತು ಶೂದ್ರ ಶಿಕ್ಷಣಕ್ಕೆ ಅರ್ಹರಲ್ಲ ಎಂಬುದೇ ಭಾರತೀಯ ಪುರೋಹಿತಶಾಹಿಗಳ ಧ್ಯೇಯವಾಕ್ಯವಾಗಿತ್ತು. ಭಾರತದಲ್ಲಿ ಮಹಿಳೆಗೆ ಶಿಕ್ಷಣದ ಹಕ್ಕನ್ನು ನಿರಾಕರಿಸಿದ್ದು ಆಕೆಯನ್ನು ಪುರುಷ ಪ್ರಧಾನ ವೈದಿಕ ಸಂಸ್ಕೃತಿ ಅಧೀನಗೊಳಿಸಿಕೊಳ್ಳುವ ಹುನ್ನಾರಕ್ಕೆ ಅನುಗುಣವಾಗಿತ್ತು.

ಬ್ರಿಟಿಷರ ಆಡಳಿತ ಕಾಲದಲ್ಲಿ ಜಾರಿಗೊಂಡ ಆಡಳಿತ ಸುಧಾರಣೆಗಳು, ಶಿಕ್ಷಣ ಕ್ರಮಗಳು: ರಾಜಾರಾಮ ಮೋಹನರಾಯ್, ಸ್ವಾಮಿ ದಯಾನಂದ ಸರಸ್ವತಿ, ಸ್ವಾಮಿ ವಿವೇಕಾನಂದ, ಮಹಾತ್ಮಾಗಾಂಧಿ, ಪಂಡಿತ್ ನೆಹರು, ಡಾ। ಬಿ.ಆರ್. ಅಂಬೇಡ್ಕರ್ ಮುಂತಾದ ರಾಷ್ಟ್ರೀಯ-ರಾಜಕೀಯ, ಸಮಾಜ ಸುಧಾರಣಾ, ಸಾಂಸ್ಕೃತಿಕ ನಾಯಕರ ಚಿಂತನೆಗಳ ಹಾಗೂ ಪ್ರಯತ್ನಗಳ ಫಲವಾಗಿ ಮಹಿಳಾ ಶಿಕ್ಷಣದ ಅಗತ್ಯ ಮತ್ತು ಮಹತ್ವವನ್ನು ಮನಗಾಣಲಾಯಿತು. ಹೀಗಾಗಿ ಶಿಕ್ಷಣವನ್ನು ನಮ್ಮ ಸಂವಿಧಾನದ ಸರಕಾರಿ ನೀತಿಯ ನಿರ್ದೇಶಕ ಸೂತ್ರಗಳಲ್ಲಿ ಕಲ್ಯಾಣ ರಾಷ್ಟ್ರ ಪರಿಕಲ್ಪನೆಯ ಭಾಗವಾಗಿ ಸೇರ್ಪಡೆಗೊಳಿಸಲಾಗಿದೆ. ಹೀಗೆ ಭಾರತ ಸರ್ಕಾರವು ೧೪ ವರ್ಷಗಳವರೆಗಿನ ಪ್ರಾಯದ ಎಲ್ಲಾ ಮಕ್ಕಳಿಗೂ ಶಿಕ್ಷಣ ನೀಡುವ ಸಾರ್ವತ್ರಿಕ ಉದ್ದೇಶ ಹೊಂದಿದೆ. ಈ ಮಾತು ನಮ್ಮ ಹೆಣ್ಣು ಮಕ್ಕಳಿಗೂ ಅನ್ವಯಿಸುತ್ತದೆ. ಹೀಗೆ ಭಾರತೀಯ ಸಂವಿಧಾನವು ಮೊತ್ತಮೊದಲ ಸಲಕ್ಕೆ ಲಿಂಗ ತಾರತಮ್ಯವಿಲ್ಲದೆ ಶಿಕ್ಷಣ ಅವಕಾಶವನ್ನು ಗಂಡುಹೆಣ್ಣು ಮಕ್ಕಳೀರ್ವರಿಗೂ ಕಲ್ಪಿಸಿತು.

**ಕೋಷ್ಟಕ ೨.೧. ಭಾರತದಲ್ಲಿ ಸಾಕ್ಷರತೆ ದರಗಳು (೧೯೫೧-೨೦೦೧)**

**ಶೇಕಡಾ**

| ವರ್ಷ | ಮಹಿಳೆ | ಪುರುಷ |
|---|---|---|
| 1951 | 8.86 | 27.16 |
| 1961 | 15.34 | 40.40 |
| 1971 | 21.97 | 45.95 |
| 1981 | 29.85 | 56.50 |
| 1991 | 39.03 | 64.13 |
| 2001 | 54.16 | 75.85 |

ಮೂಲ: ಭಾರತ ಸರ್ಕಾರ, ಜನಗಣತಿ ವರದಿಗಳು, ರಿಜಿಸ್ಟ್ರಾರ್ ಜನರಲ್ ಆಫ್ ಇಂಡಿಯಾರವರ ಕಛೇರಿ, ನವದೆಹಲಿ.

೧೯೫೧ರಲ್ಲಿ ಮಹಿಳಾ ಸಾಕ್ಷರತೆಯು, ಅಂದರೆ ಒಟ್ಟು ಮಹಿಳೆಯರ ಪೈಕಿ ಓದಲು ಬರೆಯಲು ಕಲಿತವರ ಸಂಖ್ಯೆಯು, ಶೇಕಡಾ ೮.೮೬ರಷ್ಟಿದ್ದದ್ದು ೧೯೯೧ರ ವೇಳೆಗೆ ಶೇಕಡಾ ೩೯.೦೩ರಷ್ಟಿತ್ತು. ಇದು ೨೦೦೧ರ ಜನಗಣತಿ ವೇಳೆಗೆ ಇನ್ನಷ್ಟು ವೃದ್ಧಿಸಿದೆ. ಈ ಹೆಚ್ಚಳವು ೧೯೫೧-೧೯೯೧ರ ಅವಧಿಯಲ್ಲಾದ ಪುರುಷರ ಸಾಕ್ಷರತೆ ಏರಿಕೆಯ ಎರಡುಪಟ್ಟು ಹೆಚ್ಚಾಗಿದೆ. ಅಂದರೆ ಭಾರತದಲ್ಲಿ ಮಹಿಳಾ ಸಾಕ್ಷರತೆ ಕ್ರಮೇಣವಾಗಿ ಹೆಚ್ಚುತ್ತಿದೆ ಎಂದರ್ಥ (ಉಷಾ, ೨೦೦೪).

ಪ್ರಾಥಮಿಕ ಶಿಕ್ಷಣ ಮಟ್ಟದಲ್ಲಿ ೧೯೫೦-೫೧ರಲ್ಲಿ ಹುಡುಗಿಯರ ದಾಖಲಾತಿಯು ೫.೪ ಮಿಲಿಯನ್‌ನಷ್ಟಿದ್ದು ಅದು ೧೯೯೬-೯೭ರ ವೇಳೆಗೆ ೪೭.೯ ಮಿಲಿಯನ್‌ನಷ್ಟಾಯಿತು. ಈ ಹೆಚ್ಚಿನ ೯ಪಟ್ಟು ಏರಿಕೆಯನ್ನು ಮಹಿಳಾ ಪ್ರಾಥಮಿಕ ಶಿಕ್ಷಣದಲ್ಲಿ ಪ್ರತಿನಿಧಿಸುತ್ತದೆ. ಇದೇ ಅವಧಿಯಲ್ಲಿ ಮಾಧ್ಯಮಿಕ ಶಿಕ್ಷಣ ಮಟ್ಟದಲ್ಲಿ ಹುಡುಗಿಯರ ದಾಖಲಾತಿಯು ೦.೫ ಮಿಲಿಯನ್‌ನಿಂದ ೧೬.೩ ಮಿಲಿಯನ್‌ಗೆ ಮತ್ತು ಪ್ರೌಢಶಾಲಾ ಮಟ್ಟದಲ್ಲಿ ೦.೨ ಮಿಲಿಯನ್‌ನಿಂದ ೯.೮ ಮಿಲಿಯನ್‌ಗೆ ಏರಿಕೆಯಾಗಿದೆ. ಇದು ಮಾಧ್ಯಮಿಕ ಮತ್ತು ಪ್ರೌಢಶಾಲಾ ಮಟ್ಟದಲ್ಲಿ ಅನುಕ್ರಮವಾಗಿ ೩೨ ಪಟ್ಟು ಮತ್ತು ೪೯ಪಟ್ಟು ಏರಿಕೆಯನ್ನು ಸೂಚಿಸುವುದು.

ಉನ್ನತ ಶಿಕ್ಷಣದಲ್ಲಿ ಮಹಿಳಾ ದಾಖಲಾತಿಯು ೧೯೯೦-೯೧ರಲ್ಲಿ ೧೩.೬೦ ಲಕ್ಷವಿದ್ದು ಅದು ೧೯೯೬-೯೭ರ ವೇಳೆಗೆ ೨೧.೪೯ ಲಕ್ಷಕ್ಕೆ ಏರಿಕೆಯಾಯಿತು. ಈ ಪೈಕಿ ಮಹಿಳೆಯರು ಮತ್ತು ಹುಡುಗಿಯರು ಪದವಿ ಮಟ್ಟಕ್ಕೆ ಬಹುತೇಕ ತಮ್ಮ ಶಿಕ್ಷಣವನ್ನು ಸೀಮಿತಗೊಳಿಸುವುದಲ್ಲದೆ, ಈ ಪೈಕೆ ಬಹುಸಂಖ್ಯಾ ಹುಡುಗಿಯರು ಬಿ.ಎ. ಮತ್ತು ಬಿ.ಕಾಂ. ಶಿಕ್ಷಣ ಪಡೆಯುತ್ತಿರುವುದು ಕಂಡುಬಂದಿದೆ.

ಎಲ್ಲಾ ಶಿಕ್ಷಣ ಮಟ್ಟಗಳಲ್ಲೂ ಸ್ವಾತಂತ್ರ್ಯದ ನಂತರ ಮಕ್ಕಳ ಶಾಲಾ ದಾಖಲಾತಿ ಮಟ್ಟದಲ್ಲಿ ಗಣನೀಯ ಏರಿಕೆ ಉಂಟಾಗಿದೆ. ಪ್ರಾಥಮಿಕ ಹಂತದಲ್ಲಿ ಶಾಲಾ ದಾಖಲಾತಿಯು ೧೯೫೧ರಲ್ಲಿ ೧೯.೨ ಮಿಲಿಯನ್ ಇದ್ದು, ೧೯೯೭ರ ವೇಳೆಗೆ ೧೧೦.೪ ಮಿಲಿಯನ್ ಹೆಚ್ಚಳವಾಗಿದೆ. ಮಾಧ್ಯಮಿಕ ಹಂತದಲ್ಲಿ ಶಾಲಾ ದಾಖಲಾತಿ ೩.೧ ಮಿಲಿಯನ್‌ನಿಂದ ೧೯೯೭ರ ವೇಳೆಗೆ ೪೧.೦ ಮಿಲಿಯನ್‌ಗೆ ಏರಿಕೆಯಾಗಿದೆ. ಪ್ರೌಢಶಾಲಾ ಮಟ್ಟದಲ್ಲಿ ದಾಖಲಾತಿಯು ೧೯೫೧ರಲ್ಲಿ ೧.೫ ಮಿಲಿಯನ್ ಆಗಿದ್ದು ೧೯೯೭ರ ವೇಳೆಗೆ ೨೭ ಮಿಲಿಯನ್ ಆಗಿದೆ. ೧೯೫೧-೧೯೯೭ರ ಅವಧಿಯಲ್ಲಿ ಶಾಲಾ ದಾಖಲಾತಿ ಪ್ರಾಥಮಿಕ ಹಂತದಲ್ಲಿ ೬ ಪಟ್ಟು, ಮಾಧ್ಯಮಿಕ ಹಂತದಲ್ಲಿ ೪೩ ಪಟ್ಟು ಮತ್ತು ಪ್ರೌಢಶಾಲಾ ಹಂತದಲ್ಲಿ ೧೮ ಪಟ್ಟು ಹೆಚ್ಚಳ ಕಂಡಿದೆ. ಆದರೆ ಈ ಅವಧಿಯಲ್ಲಿ ಶಾಲೆ ತೊರೆದವರ ಸಂಖ್ಯೆಯೂ ವಿವಿಧ ಶಾಲಾ ಹಂತಗಳಲ್ಲಿ ಅತ್ಯಧಿಕವಾಗಿಯೇ ಇದೆ.

೧೯೮೧ ಮತ್ತು ೧೯೯೭ರ ನಡುವಣ ಅವಧಿಯಲ್ಲಿ ಪ್ರಾಥಮಿಕ ಶಿಕ್ಷಣ ಮಟ್ಟದಲ್ಲಿ ಶಾಲೆ ತೊರೆದವರ ದರವು ಶೇಕಡಾ ೫೮.೭ರಿಂದ ೩೮.೯ಕ್ಕೆ ಕುಸಿದಿದೆ. ಇದೇ ಅವಧಿಯಲ್ಲಿ ಮಾಧ್ಯಮಿಕ ಶಾಲಾಮಟ್ಟದಲ್ಲಿ ಶಾಲೆ ತೊರೆದವರ ಪ್ರಮಾಣವು ಶೇಕಡಾ ೭೨.೭ರಿಂದ ೫೨.೩ಕ್ಕೆ : ಪ್ರೌಢಶಾಲೆ ಹಂತದಲ್ಲಿ ಶೇಕಡಾ ೮೨.೫ರಿಂದ ೬೮.೪ಕ್ಕೆ ಇಳಿತಾಯವಾಗಿದೆ. ಇದೊಂದು ಸಾಧನೆ ಎಂಬಂತೆ ಸರ್ಕಾರ, ಯೋಜನಾ ಆಯೋಗ ಬಣ್ಣಿಸಿವೆ. ಆದರೆ ಶಿಕ್ಷಣದ ಎಲ್ಲಾ ಹಂತಗಳಲ್ಲೂ ಶಾಲೆ ತೊರೆಯುತ್ತಿರುವವರ ಸಂಖ್ಯೆ ಅಪಾರವಾಗಿಯೇ ಇನ್ನೂ ಉಳಿದಿದೆ. ಈ ಅಂಶವು ನಮ್ಮ ಶಾಲಾ ಶಿಕ್ಷಣ ಯೋಜನೆಗಳ ವೈಫಲ್ಯಕ್ಕೆ ಕನ್ನಡಿ ಹಿಡಿಯುತ್ತದೆ.

ಮೇಲ್ಕಂಡ ಎಲ್ಲಾ ಲಾಭಗಳ ಹೊರತಾಗಿಯೂ ಮಹಿಳ ಸಾಕ್ಷರತೆ ದರವು ಇನ್ನೂ ಬಹಳ ಅಲ್ಪವಾಗುಳಿದಿದೆ. ಅದು ೧೯೯೧ರಲ್ಲಿ ಶೇಕಡಾ ೩೯.೩ರಷ್ಟಿತ್ತು. ಮಹಿಳೆಯ ಶೈಕ್ಷಣಿಕ ಅಭಿವೃದ್ಧಿಯ ಮಂದಗತಿಯು ಕಳವಳದ ಸಂಗತಿಯಾಗಿದೆ. ಆದರೆ ಮಹಿಳಾ ಶಿಕ್ಷಣದ ಮಂದಗತಿಯು ಅನೇಕ ಗಂಭೀರ ಬಿಕ್ಕಟ್ಟುಗಳನ್ನು ಹುಟ್ಟುಹಾಕುತ್ತಿದೆ. ಮಹಿಳಾ ಸಾಕ್ಷರತೆ ಮತ್ತು ಶಿಕ್ಷಣದಲ್ಲಿ ಅಪಾರವಾದ ಅಂತರಾಜ್ಯ ಅಂತರ, ನಗರ–ಗ್ರಾಮೀಣ, ಲಿಂಗ ವ್ಯತ್ಯಯಗಳಿವೆ. ಹೆಣ್ಣುಮಕ್ಕಳ ಶಾಲೆ ತೊರೆಯುವಂತೆ ಅಗಾಧವಾಗಿದೆ. ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳ/ ಇತರ ಹಿಂದುಳಿದ ವರ್ಗಗಳ, ಅಲ್ಪಸಂಖ್ಯಾತ ವರ್ಗಗಳ ಹೆಣ್ಣು ಮಕ್ಕಳ ಶೈಕ್ಷಣಿಕ ಸಾಧನೆ ನಗಣ್ಯವಾಗಿದೆ. ಎಲ್ಲಾ ವರ್ಗಗಳ ನಡುವೆ ಹೆಣ್ಣುಮಕ್ಕಳ ಶಿಕ್ಷಣ ಸಾಧನೆಯಲ್ಲಿ ಅಪಾರ ವ್ಯತ್ಯಾಸವಿದೆ. ಮಕ್ಕಳ ಶಿಕ್ಷಣದ ವೈಫಲ್ಯವು, ವಿಶೇಷವಾಗಿ ಹೆಣ್ಣುಮಕ್ಕಳ ಶಿಕ್ಷಣದ ವೈಫಲ್ಯವು ಬಾಲಕಾರ್ಮಿಕ ಪದ್ಧತಿಯ ಮುಂದುವರಿಕೆಗೆ ಕಾರಣವಾಗಿದೆ. ಇಲ್ಲಿ ಬಡತನವೇ ಮಕ್ಕಳ ಶತ್ರು, ಶಾಲೆತೊರೆದ ಮತ್ತು ಶಾಲೆಗೇ ಹೋಗದ ಮಕ್ಕಳೆಲ್ಲರೂ ಸಾಮಾನ್ಯವಾಗಿ ಬಾಲಕಾರ್ಮಿಕರೇ. ವಿಶೇಷವಾಗಿ ಶಿಕ್ಷಣದಿಂದ ವಂಚಿತರಾದ ಹೆಣ್ಣು ಮಕ್ಕಳೆಲ್ಲರೂ ಕುಟುಂಬದೊಳಗೆ, ಹೊರಗೆ ಬಾಲಕಾರ್ಮಿಕರೇ ಆಗಿಬಿಡುವರು. ಇದೊಂದು ಗಂಭೀರ ಮಹಿಳಾ ಸಮಸ್ಯೆ. ಅದು ಸಾಮಾಜಿಕ ಅಭಿವೃದ್ಧಿ ಸಮಸ್ಯೆ ಕೂಡಾ ಹೌದು (ವನಜ, ೨೦೦೩).

## ೨.೨.೧ ಒಂಭತ್ತನೇ ಪಂಚವಾರ್ಷಿಕ ಯೋಜನೆಯಲ್ಲಿ ದಲಿತ/ಹಿಂದುಳಿದ ವರ್ಗಗಳ ಮಹಿಳಾ ಶಿಕ್ಷಣಕ್ಕೆ ವಿಶೇಷ ಕಾರ್ಯಕ್ರಮಗಳು

ಶಾಲೆ ತೊರೆಯುವ ಮತ್ತು ಎಂದೆಂದಿಗೂ ಶಾಲೆಗೆ ಹೋಗದಿರುವ ಮಕ್ಕಳ, ವಿಶೇಷವಾಗಿ ಮಹಿಳೆ/ಹೆಣ್ಣು ಮಕ್ಕಳ ಸಂಖ್ಯೆಯು ದಲಿತ ಮತ್ತು ಹಿಂದುಳಿದ ವರ್ಗಗಳಲ್ಲಿ ಅಪಾರವಾಗಿದೆ. ಇದಕ್ಕೆ ಈ ಜನವರ್ಗಗಳ ಕಡುಬಡತನ ಮತ್ತು ಸಾಮಾಜಿಕ ಅನಾನುಕೂಲತೆಯೇ ಪ್ರಮುಖ ಕಾರಣಗಳಾಗಿವೆ. ಈ ಬಡವರ್ಗಗಳ ಮಕ್ಕಳ, ವಿಶೇಷವಾಗಿ ಹೆಣ್ಣು ಮಕ್ಕಳ ಆರ್ಥಿಕ ಸಾಮಾಜಿಕ ಶಕ್ತಿ ಸಂವರ್ಧನೆಗಾಗಿ ಒಂಭತ್ತನೇ ಪಂಚವಾರ್ಷಿಕ ಯೋಜನೆಯಲ್ಲಿ ಕೆಳಕಂಡ ಕಾರ್ಯವ್ಯೂಹವನ್ನು ಪ್ರಸ್ತಾವಿಸಲಾಗಿದೆ.

ಕ್ರಿ.ಶ. ೨೦೦೫ರ ವೇಳೆಗೆ ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣಗೊಳಿಸುವುದು. ಇದಕ್ಕಾಗಿ ಅತ್ಯಲ್ಪ ಸಾಕ್ಷರತೆ ಪ್ರದೇಶಗಳು ಹಾಗೂ ದಲಿತ ಮತ್ತು ಹಿಂದುಳಿದ ವರ್ಗಗಳ ಜನರು ವಾಸಿಸುವ ಪ್ರದೇಶಗಳಿಗೆ ವಿಶೇಷ ಗಮನ/ಆದ್ಯತೆ ನೀಡಿಕೆ.

ತಲುಪದಿರುವವರನ್ನು ತಲುಪುವುದು – ಅಂದರೆ ಗುಡ್ಡಕಾಡು ಪರ್ವತ ಪ್ರದೇಶಗಳು, ಹಳ್ಳಕಣಿವೆಗಳು, ಅರಣ್ಯ ಪ್ರದೇಶಗಳಲ್ಲಿ ಶಿಕ್ಷಣಕ್ಕಾಗಿ ವಸತಿ ನಿಲಯಗಳನ್ನು ಶಾಲೆಗಳನ್ನು ಏಕ ಉತ್ಪನ್ನವಾಗಿ ತೆರೆಯುವುದು. ಈ

ಮೂಲಕ ಭೌಗೋಳಿಕವಾಗಿ ಕಷ್ಟಕರವಾದ ಪ್ರದೇಶಗಳಲ್ಲಿರುವ ಮಕ್ಕಳ ಶಾಲಾ ಪ್ರವೇಶಾತಿಯನ್ನು, ಶಾಲೆಯಲ್ಲೇ ಉಳಿಯುವ ಸಾಧ್ಯತೆಯನ್ನು ಕಲಿಕೆ ಸಾಮರ್ಥ್ಯಗಳನ್ನು ಉತ್ತಮಪಡಿಸುವುದು. ದಲಿತ ಮಕ್ಕಳಿಗಾಗಿ, ವಿಶೇಷವಾಗಿ ಹೆಣ್ಣು ಮಕ್ಕಳಿಗಾಗಿ ಉಚಿತ ಶಿಕ್ಷಣ, ಉಚಿತ ಪಠ್ಯಪುಸ್ತಕ, ಶಾಲಾಸಮವಸ್ತ್ರ, ಕಲಿಕೆ, ಲೇಖನ ಸಾಮಾಗ್ರಿಗಳ ಹಂಚಿಕೆ, ದೇಶದೊಳಗೆ ಮತ್ತು ವಿದೇಶಗಳಲ್ಲಿ ಕಲಿಯಲು ಶಿಷ್ಯವೇತನಗಳನ್ನು ಸಂಶೋಧನಾ ವೇತನಗಳನ್ನು ನೀಡುವುದು. ಈಗಾಗಲೆ ಅನೇಕ ವಿಶ್ವವಿದ್ಯಾನಿಯಲಗಳಲ್ಲಿ ಯುಜಿಸಿ/ರಾಜ್ಯ ಸರ್ಕಾರಗಳ ನೆರವಿನಿಂದ ಸಂಶೋಧನಾ ವೇತನಗಳನ್ನು ನೀಡಲಾಗುತ್ತಿದೆ. ಅದೇ ರೀತಿ ಯುಜಿಸಿಯು ವಿದೇಶಗಳಿಗೆ ಹೋಗುವ ದಲಿತ ವಿದ್ಯಾರ್ಥಿಗಳಿಗೆ ಸಂಶೋಧನಾ ಶಿಷ್ಯವೇತನಗಳನ್ನು ನೀಡುತ್ತಿದೆ. ಅಭಿವೃದ್ಧಿ ಪರ ಕ್ರಮಗಳು ಹೀಗಿವೆ:

- ಮಾಧ್ಯಮಿಕ ಮತ್ತು ಪ್ರೌಢಶಾಲಾ ಮಟ್ಟಗಳಲ್ಲಿ ಶಿಕ್ಷಣವನ್ನು ವೃತ್ತಿಪರಗೊಳಿಸುವುದು. ಈ ಮೂಲಕ ದಲಿತ/ಹಿಂದುಳಿದ ವರ್ಗಗಳ ಜನರನ್ನು ಕೂಲಿ, ಸ್ವಉದ್ಯೋಗಕ್ಕೆ ತರಬೇತಿ ನೀಡಿ ಸಜ್ಜುಗೊಳಿಸುವುದು.
- ದಲಿತ ಮತ್ತು ಹಿಂದುಳಿದ ವರ್ಗಗಳ ಹೆಣ್ಣುಮಕ್ಕಳಿಗೆ ಉನ್ನತ, ಸಾಮಾನ್ಯ ಶಿಕ್ಷಣ, ತಾಂತ್ರಿಕ, ವೃತ್ತಿಪರ ಶಿಕ್ಷಣಕ್ಕಾಗಿ ಶಿಷ್ಯವೇತನ ನೀಡುವ ಕಾರ್ಯಕ್ರಮವನ್ನು ಜಾರಿಗೊಳಿಸುವುದು.
- ಅನೈರ್ಮಲ್ಯಕರ ವೃತ್ತಿಗಳಲ್ಲಿ ತೊಡಗಿರುವವರ ಮಕ್ಕಳ ಶಿಕ್ಷಣವನ್ನು ಉತ್ತೇಜಿಸುವುದು ಮತ್ತು ಇವರನ್ನು ನೈರ್ಮಲ್ಯ ಕೆಲಸದಿಂದ ದೂರಸರಿಯುವಂತೆ ಮಾಡುವುದು. ಇವರಿಗಾಗಿ ಪೋಸ್ಟ್-ಮೆಟ್ರಿಕ್ ವಿದ್ಯಾರ್ಥಿ ವೇತನಗಳನ್ನು ನೀಡುವುದು.
- ಅತೀ ಹಿಂದುಳಿದ ಗ್ರಾಮೀಣ ಪ್ರದೇಶಗಳ ಮತ್ತು ಗುಡ್ಡಗಾಡು ಪ್ರದೇಶಗಳಲ್ಲಿ ಅಂಗನವಾಡಿಗಳನ್ನು ತೆರೆಯುವುದು. ಈ ಮೂಲಕ ಹೆಣ್ಣು ಮಕ್ಕಳು ಶಾಲೆಗೆ ಹೋಗುವುದನ್ನು ಉತ್ತೇಜಿಸುವುದು.
- ಮಧ್ಯಾಹ್ನದ ಊಟದ ಕಾರ್ಯಕ್ರಮವನ್ನು ಎಲ್ಲಾ ಗ್ರಾಮೀಣ ಮತ್ತು ಬುಡಕಟ್ಟು ಪ್ರದೇಶಗಳ ಶಾಲೆಗಳಲ್ಲೂ ಮುಂದುವರೆಸುವುದು. ಈ ಮೂಲಕ ಅತ್ಯಂತ ಬಡಮಕ್ಕಳ ಪೌಷ್ಟಿಕಾಹಾರದ ಅಗತ್ಯಗಳನ್ನು ಪೂರೈಸುವುದು.
- ಉದ್ಯೋಗ ಪ್ರೇರಿತ ಶಿಕ್ಷಣ ಮತ್ತು ತರಬೇತಿ ಕಾರ್ಯಕ್ರಮಗಳನ್ನು ಆದ್ಯತೆ ಮೇರೆಗೆ ಮಾಧ್ಯಮಿಕ/ಪ್ರೌಢಶಾಲೆಗಳ ಮಟ್ಟದಲ್ಲಿ ಜಾರಿಗೊಳಿಸುವುದು. ಇದನ್ನು ಪಂಚಾಯತ್‌ರಾಜ್

ಸಂಸ್ಥೆಗಳ ಮೂಲಕ ಪರಾಮರ್ಶಿಸುವಂತೆ ಮಾಡಲಾಗುವುದು. ಈ ಗ್ರಾಮೀಣ ಮತ್ತು ಬುಡಕಟ್ಟು ಜನರ ಭವಿಷ್ಯದ ಬಡತನದ ಮೇಲೆ ಧಾಳಿ ಮಾಡುವ ಗುರಿಯಿರಿಸಿಕೊಳ್ಳಲಾಗಿದೆ.

- ಪುರಾತನ ಬುಡಕಟ್ಟು ಜನರ ಮಕ್ಕಳ ಶಿಕ್ಷಣಕ್ಕಾಗಿ ಆದ್ಯತೆ ನೀಡುವುದು.
- ಮುಸ್ಲಿಂ ಮಹಿಳೆಯರ ಹೆಣ್ಣು ಮಕ್ಕಳ ಶಿಕ್ಷಣವನ್ನು ಬಲಪಡಿಸಲು ಮೌಲಾನಾ ಆಜಾದ್ ಶಿಕ್ಷಣ ಪ್ರತಿಷ್ಠಾನ, ನವದೆಹಲಿಯ ಕಾರ್ಯಕ್ರಮಗಳನ್ನು ವಿಸ್ತರಿಸಿ ಬಲಪಡಿಸುವುದು. ಮುಸ್ಲಿಂ ಹೆಣ್ಣುಮಕ್ಕಳು ಉನ್ನತ ಸಾಮಾನ್ಯ ಶಿಕ್ಷಣ ಮತ್ತು ತಾಂತ್ರಿಕ ಶಿಕ್ಷಣ ಪಡೆಯಲು ನೆರವಾಗಲು ಶಿಷ್ಯ ವೇತನಗಳನ್ನು ಸಂಶೋಧನಾ ವೇತನಗಳನ್ನು ನೀಡುವುದು.

ಒಂಭತ್ತನೇ ಪಂಚವಾರ್ಷಿಕ ಯೋಜನೆಯಲ್ಲಿ ಮೊತ್ತಮೊದಲ ಬಾರಿಗೆ ಮುಸ್ಲಿಂ ಮಹಿಳೆಯರ ಮತ್ತು ಹೆಣ್ಣು ಮಕ್ಕಳ ಶಿಕ್ಷಣದ ಕುರಿತು ಕಾರ್ಯವ್ಯೂಹ ನಿರೂಪಿಸಿ, ಜಾರಿಗೊಳಿಸುವ ಅಗತ್ಯ. ವಿಧಿವಿಧಾನದ ಬಗೆಗೆ ಪ್ರಸ್ತಾಪವಿದೆ. ಇದರ ಪ್ರಮುಖ ಲಕ್ಷಣಗಳಿಂದರೆ:

೧. ಮುಸ್ಲಿಂ ಮಹಿಳೆಯರ/ಹೆಣ್ಣುಮಕ್ಕಳ ಎಲ್ಲಾ ಹಂತಗಳ ಮತ್ತು ಬಗೆಗಳ ಶಿಕ್ಷಣದ ಬಗೆಗೆ ಆದ್ಯತೆ ನೀಡುವುದು.

೨. ಮುಸ್ಲಿಂ ಜನಸಂಖ್ಯೆ ಅಪಾರ ಪ್ರಮಾಣದಲ್ಲಿ ಕೇಂದ್ರೀಕೃತವಾಗಿರುವ ಸ್ಥಳಗಳಲ್ಲಿ ಮೂಲಭೂತ ಶಿಕ್ಷಣ ಸೇವಾ ಸೌಲಭ್ಯಗಳನ್ನು ಕಲ್ಪಿಸುವುದು. ಹೀಗೆ ಮುಸ್ಲಿಂ ಮಹಿಳೆ/ಹೆಣ್ಣುಮಕ್ಕಳ ಶಿಕ್ಷಣ ಪ್ರವೇಶಾತಿ ಸೌಲಭ್ಯವನ್ನು ವಿಸ್ತರಿಸುವುದು.

೩. ಮುಸ್ಲಿಂ ಮಹಿಳೆ/ಹೆಣ್ಣುಮಕ್ಕಳ ಶಿಕ್ಷಣವನ್ನು ಉತ್ತೇಜಿಸಲು, ಪ್ರೇರೇಪಿಸಲು ಶೈಕ್ಷಣಿಕ ವೇಗವರ್ಧಕ ಪಾತ್ರವಹಿಸಲು ಸಾಧ್ಯವಾಗುವಂತೆ ಅವರವರ ತಂದೆ–ತಾಯಿಯರನ್ನು, ಸಮುದಾಯ ಧರ್ಮದ ನಾಯಕರನ್ನು ಬಳಸಿಕೊಳ್ಳುವುದು. ಇದು ಮುಸ್ಲಿಂ ಜನಾಂಗದ ವಿಷಯದಲ್ಲಿ ಬಹಳ ಮಹತ್ವದ್ದಾಗಿದೆ. ಇವರ ಬೆಂಬಲ ಮತ್ತು ಸಹಕಾರವಿಲ್ಲದಿದ್ದರೆ ಸರ್ಕಾರದ ಯಾವ ಕಾರ್ಯಕ್ರಮವೂ ಸಾಮಾನ್ಯ ಮುಸ್ಲಿಮರನ್ನು ತಲುಪದಿರುವ ಅಪಾಯವಿದೆ.

೪. ಮುಸ್ಲಿಮರ ಸಾಂಪ್ರದಾಯಿಕ ಶಾಲೆಗಳಾದ 'ಮದ್ರಸಾ'ಗಳ ಶಿಕ್ಷಣಕ್ರಮವನ್ನು ಆಧುನಿಕ ಗೊಳಿಸಲು ಒಂಭತ್ತನೇ ಪಂಚವಾರ್ಷಿಕ ಯೋಜನೆಯಲ್ಲಿ ಆದ್ಯತೆ ನೀಡಲಾಗುವುದೆಂದು ಹೇಳಲಾಗಿದೆ. ಈ ಮೂಲಕ ಮುಸ್ಲಿಂ ವಿದ್ಯಾರ್ಥಿಗಳಲ್ಲಿನ ಶಿಸ್ತಿನ ಕೊರತೆಯನ್ನು ಮತ್ತು ಅಧಿಕವಾಗಿರುವ ಶಾಲಾ ತೊರೆಯುವಿಕೆಯನ್ನು ಪರಿಹರಿಸಲೆತ್ನಿಸಲಾಗುವುದು. 'ಮದ್ರಸಾ'ಗಳ

ಆಧುನೀಕರಣವೆಂದರೆ ಪವಿತ್ರ ಕುರಾನ್‌ನ ಕಲಿಕೆ ಜೊತೆಗೆ ಗಣಿತಶಾಸ್ತ್ರ, ವಿಜ್ಞಾನಿಗಳು, ಸಾಮಾನ್ಯ ಅಧ್ಯಯನಗಳು, ಇಂಗ್ಲಿಷ್ ಎಲ್ಲವನ್ನು ಕಲಿಸಲು ವ್ಯವಸ್ಥೆ ಮಾಡುವುದೆಂದರ್ಥ. ಹೀಗೆ ಮುಸ್ಲಿಂ ವಿದ್ಯಾರ್ಥಿಗಳನ್ನು ದೇಶದ ಶೈಕ್ಷಣಿಕ ಅಭಿವೃದ್ಧಿಯ ಮುಖ್ಯ ವಾಹಿನಿಗೆ ತರಲೆತ್ನಿಸಲಾಗುವುದು.

ಮಹಿಳೆಯರು ಎದುರಿಸುವ ಒಳಗಿನ ಮತ್ತು ಹೊರಗಿನ ವೈರುಧ್ಯವನ್ನು ದುರ್ಬಲಗೊಳಿಸಲು ಶಿಕ್ಷಣಕ್ಕೆ ಸರಿಸಾಟಿಯಾದುದಿಲ್ಲ. ಹಾಗೆಯೇ ಶಿಕ್ಷಣವು ಮಹಿಳೆಯರಿಗೆ ಆರ್ಥಿಕ ಅವಕಾಶಗಳನ್ನು ವಿಸ್ತರಿಸಲು ಅತ್ಯಂತ ಮಹತ್ವದ ಪರಿಕರವಾಗಿದೆ. ಹುಡುಗಿಯರಿಗೆ ಶಾಲಾ ಹಾಜರಾತಿಯು ಕುಟುಂಬದಿಂದ ಹೊರಗಿನ ಸಾಮಾಜಿಕ ಪರಿಸರಗಳನ್ನು ಪರಿಚಯಿಸುತ್ತದೆ ಮತ್ತು ಅದು ಹುಡುಗಿಯರು ಸಾರ್ವಜನಿಕ ಚರ್ಚೆಗಳಲ್ಲಿ ಮತ್ತು ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುವ ವಿಶ್ವಾಸವನ್ನು ಹೆಚ್ಚಿಸುವುದು, ಸ್ವಯಂ ಸಾಕ್ಷರತೆಯು ವ್ಯಾಪಕವಾಗಿ ಹೊಸ ಮಾಹಿತಿಗೆ ವ್ಯಕ್ತಿಗಳನ್ನು ತೆರೆಯುವುದು. ಅಲ್ಲದೆ ಶಿಕ್ಷಣವು ಅಸ್ತಿತ್ವದಲ್ಲಿರುವ ಮಾಹಿತಿಗಳನ್ನು ಕುರಿತು ಹೊಸ ದೃಷ್ಟಿಕೋನಗಳನ್ನು ಬೆಳೆಸುವುದು. ಶಿಕ್ಷಣವು ಭಾರತೀಯ ಮಹಿಳೆಯರ ಮೇಲೂ ಹತ್ತು ಹಲವು ಉತ್ತಮ ಪರಿಣಾಮಗಳನ್ನು ಬೀರಿದೆ. ಶಿಕ್ಷಣವು ಉತ್ತಮ ಶುಚಿತ್ವ, ಆಹಾರ ಮತ್ತು ಕ್ಲಪ್ತ ಸಮಯದಲ್ಲಿ ವೈದ್ಯಕೀಯ ನೆರವನ್ನು ಕೇಳುವ ಸಮಯ ಪ್ರಜ್ಞೆಯನ್ನು ಹೆಣ್ಣುಮಕ್ಕಳಲ್ಲಿ ಬೆಳೆಸುವುದು. ಇದು ಮಹಿಳೆಯ ಆರೋಗ್ಯ ಸ್ಥಿತಿಗತಿಯನ್ನು ಉತ್ತಮ ಪಡಿಸುವುದು ಮತ್ತು ಶಿಕ್ಷಣವು ಮಹಿಳೆಯ ಮಾತೃತ್ವದ ಸಾಮರ್ಥ್ಯವನ್ನು ಹೆಚ್ಚಿಸುವುದು. ಈ ಮೂಲಕ ಶಿಶು ಮರಣ ಪ್ರಮಾಣವು ಇಳಿತಾಯವಾಗುವುದು. ಒಬ್ಬ ತಾಯಿಯ ಪ್ರಾಥಮಿಕ ಶಿಕ್ಷಣವು ಶಿಶು ಮರಣವನ್ನು, ಪ್ರತಿ ೧೦೦೦ ಜೀವಂತ ಜನನಗಳಿಗೆ ೭೧ಕ್ಕೆ ಇಳಿಸುವುದು. ಅನಕ್ಷರಸ್ಥ ತಾಯಂದಿರಿಗೆ ಜನನವಾಗುವ ಪ್ರತಿ ೧೦೦೦ ಜೀವಂತ ಮಕ್ಕಳಲ್ಲಿ ೧೪೭ ಮರಣ ಹೊಂದುವುವು. ಈ ಸಂಗತಿಯು ಭಾರತದ ೧೯೮೧ರ ಜನಗಣತಿಯಿಂದ ತಿಳಿದು ಬಂದಿದೆ. ಮಗುವಿನ ಬದುಕುಳಿಯುವ ಹೆಚ್ಚು ಸಂಭಾವ್ಯತೆಯು ಶಿಕ್ಷಣವನ್ನು ಫಲವಂತಿಕೆ ಕಡಿತದೊಂದಿಗೆ ಬೆಸೆಯುತ್ತದೆ. ಮಹಿಳಾ ಶಿಕ್ಷಣದೊಂದಿಗೆ ಬೆಸೆದುಕೊಂಡ ಇತರ ಅಂಶಗಳೆಂದರೆ: ವಿವಾಹದ ಮುಂದೂಡಿದ ವಯಸ್ಸು, ಸಣ್ಣ ಅಪೇಕ್ಷಿತ ಕುಟುಂಬ ಪ್ರಮಾಣ, ಗರ್ಭನಿರೋಧಕಗಳ ಉತ್ತಮ ಜ್ಞಾನ, ಅವುಗಳನ್ನು ಪಡೆಯುವ ಕುರಿತ ಹೆಚ್ಚಿನ ಅರಿವು, ಹೆಚ್ಚು ಮುಖ್ಯವಾದುದೆಂದರೆ ಮಗು ಹೊಂದುವುದನ್ನೇ ಮುಂದೂಡಬಹುದಾದ ಸಂಭಾವ್ಯತೆ, ಅಧಿಕ ಗಳಿಕೆಗಳು, ಅನಕ್ಷರಸ್ಥ ಮಹಿಳೆಯರ ಫಲವಂತಿಕೆಯು ಅಕ್ಷರಸ್ಥ ಮಹಿಳೆಯರಿಗಿಂತ ವಿಭಿನ್ನ ವಯೋಮಾನಗಳಲ್ಲಿ ಶೇ. ೩೦ರಿಂದ ೫೦ರಷ್ಟು ಹೆಚ್ಚಾಗಿರುವುದು (ಅನ್ನಪೂರ್ಣೇಶ್ವರಿ ೨೦೦೩).

## ೨.೬ ಕರ್ನಾಟಕದಲ್ಲಿ ಸ್ತ್ರೀ ಶಿಕ್ಷಣ – ಅಂದು–ಇಂದು

ಕರ್ನಾಟಕದಲ್ಲಿ ಇನ್ನಾವ ರಾಜ್ಯದಲ್ಲೂ ಕಾಣಸಿಗದಷ್ಟು ವಿದ್ಯಾಪ್ರೇಮಿಗಳು, ಕಲೆ ಮತ್ತು ಸಾಹಿತ್ಯದ ಪೋಷಕಿಯರು, ಆಡಳಿತಗಾರ್ತಿಯರು, ವೀರನಾರಿಯರು, ಸ್ವತಃ ಕವಿ ಮತ್ತು ವಿವಿಧ ಕಲೆಗಳಲ್ಲಿ ನುರಿತವರು ಕನ್ನಡ ನಾಡಿನಲ್ಲಿ ಆಗಿಹೋದರು. ಮಧ್ಯಯುಗದ ನಾರೀ ಶಿಕ್ಷಣ ಕ್ರಮದ ಮಿಂಚುನೋಟಗಳೆಂದರೆ, ಶಾಸನಗಳು, ಹೆಸರಿಸುವ, ಕೆಲವು ವಿವರ ಕೊಡುವ ಕರ್ನಾಟಕವನ್ನು ಸಂದರ್ಶಿಸಿದ ವಿದೇಶೀಯರು ಬರೆದಿಡುವಂತಹದೇ ಆಗಿದ್ದು, ಅಖಿಲ ಭಾರತೀಯ ವ್ಯಾಪ್ತಿಯುಳ್ಳದ್ದಾಗಿದೆ ಎಂದರೆ ಅತಿಶಯೋಕ್ತಿ ಯಾಗಲಾರದು. (ನಕ್ಷೆ–೧) ಜೊತೆಗೆ ಶಾಸನ ಶಿಲಾಲೇಖಗಳೂ ಭಿತ್ತಿಚಿತ್ರ ಕಾವ್ಯಗಳೂ ಮಹಿಳಾ ಸಾಧನೆಯ ಅಷ್ಟಿಷ್ಟು ಮಾಹಿತಿಯನ್ನು ಕೊಡುತ್ತವೆ.

'ಸಕಲ ವಿದ್ಯಾ ಪ್ರವೀಣೆ' ಸಾವಿನಿರ್ಮಡಿಯ ಸ್ಮಾರಕ ಶಿಲೆ ಅಪೂರ್ವವಾಗಿದೆ. ಕೋಲಾರ ಜಿಲ್ಲೆಯ ಬೌರಿಂಗ ಪೇಟೆ ತಾಲೂಕಿನ ಕಾರಬೆಲೆಯಲ್ಲಿ ದೊರೆತ ನಾಲ್ಕು ಅಡಿ ಎತ್ತರ, ಎರಡೂವರೆ ಅಡಿ ಅಗಲವಿರುವ ಶಿಲೆಯ ಮೇಲ್ಭಾಗದಲ್ಲಿ 'ಸ್ವಸ್ತಿಶ್ರೀ ನಾಗಾರ್ಜುನಯ್ಯ ನಂದಿಗಬೆಯ ಮಗಳ ಸಾವಿನಿರ್ಮಡಿ ಸರ್ವಶಾಸ್ತ್ರ ಪ್ರಸಿದ್ಧಿ ಶ್ರೀ' ಎಂಬ ಎರಡು ಸಾಲಿನ ಶಾಸನ ಬರೆಯಲಾಗಿದೆ. ಬೋಧನ ಭಂಗಿಯಲ್ಲಿ ಆಸೀನಳಾದ ತರುಣಿಯ ಎಡಭಾಗದಲ್ಲಿ ವ್ಯಾಸಪೀಠವಿದೆ. ಆಕೆ ದೊಡ್ಡ ಶಾಸ್ತ್ರಜ್ಞೆಯಿದ್ದಳು ಎಂದು ದೃಢೀಕರಿಸಲು ಎಡಗೈಯಲ್ಲಿ ಓತಿಗರಿ ಗ್ರಂಥವಿದೆ. ಐದು ಅಕ್ಷರಗಳ ಗ್ರಂಥದ ಹೆಸರಿನ ನಡುವಿನ ಅಕ್ಷರದ ಮೇಲೆ ಬೆರಳು ಇದ್ದುದ್ದರಿಂದ ಶ್ರೀ ಹ... ಸಿದ್ದಿ ಎಂದಿಷ್ಟೇ ಓದಬಹುದಾಗಿದೆ. ಇದು 'ಹರಿ' ಅಥವಾ 'ಹರ' ಎಂದು ಇದ್ದಿರಬಹುದು. ಕೇವಲ ತಂದೆ–ತಾಯಿಗಳ ಹೆಸರು ಇದ್ದುದರಿಂದ ಅವಿವಾಹಿತೆಯಿರಲು ಬಹುದು. ಅಕಾಲ ಮೃತ್ಯುವಿಗೀಡಾಗಿ, ಅವಳ ಶಾಸ್ತ್ರಸಿದ್ಧಿಯಿಂದ ಪ್ರಭಾವಿತರಾದ ಊರವರು ಈ ನೆನಪಿನ ಕಲ್ಲನ್ನು ನಿಲ್ಲಿಸಿರಲೂ ಬಹುದು. ಹತ್ತನೆಯ ಶತಮಾನದಲ್ಲಿ ಸ್ತ್ರೀಯರಿಗೆ ಶಿಕ್ಷಣ ಲಭ್ಯವಿರದಿದ್ದರೆ, ಸಾವಿನಿರ್ಮಡಿ, 'ಸಕಲಶಾಸ್ತ್ರ ಪ್ರವೀಣೆ' ಆಗುತ್ತಿರಲ್ಲಿಲ್ಲ ಮತ್ತು ಜನ ಅವಳನ್ನು ಸ್ಮರಿಸುತ್ತಿರಲಿಲ್ಲ ಎಂಬುದು ಗಮನಾರ್ಹವಾದುದು.

ಪಂಪನ ಆದಿ ಪುರಾಣದಲ್ಲೂ ಹೆಣ್ಣುಮಕ್ಕಳಿಗೆ ಲಭ್ಯವಿದ್ದ ಪ್ರಾಥಮಿಕ ಶಿಕ್ಷಣದ ಇಣುಕುನೋಟ ದೊರೆಯುತ್ತದೆ. ಆದಿನಾಥನು ಒಂದು ದಿನ ತನ್ನ ಇಬ್ಬರು ಹೆಣ್ಣು ಮಕ್ಕಳಾದ ಬ್ರಾಹ್ಮೀ ಮತ್ತು ಸುಂದರಿಯರಿಗೆ ಹೇಳಿಕಳಿಸಿ ಗುಣಶೀಲಳೊಂದಿಗೆ ವಿದ್ಯೆಯೂ ಸೇರಿಕೊಂಡರೆ ಜಗತ್ಪಾವನೆಯರಾಗುತ್ತೀರಿ ಎಂದು ಉದ್ಗರಿಸಿ, ಸ್ವತಃ ವಿದ್ಯೆ ಕೊಡಲಾರಂಭಿಸುತ್ತಾನೆ. ಸರಸ್ವತಿಯ ಪೂಜೆ ಮಾಡಿ, ಮಕ್ಕಳಿಬ್ಬರನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು, 'ಸಿದ್ಧಂನಮಃ' ಎಂದು ಬ್ರಾಹ್ಮಿಯಿಂದ ಹೇಳಿಸಿ ಬರೆಸುತ್ತಾವೆ. ಸುಂದರಿಗೆ ಅಂಕಿಗಳನ್ನು ಕಂಠಪಾಠ ಮಾಡಿಸಿ ಬರೆಯುವ ರೂಢಿ ಮಾಡಿಸುತ್ತಾನೆ. ತೊಡೆಯ ಮೇಲೆ ಕುಳ್ಳಿರಿಸಿಕೊಳ್ಳುವ ವಯಸ್ಸು


Bidar
Gulbarga
Bijapur
Bagalkot
Raichur
Belgaum
Gadag
Koppal
Dharwad
Bellary
Karwar
Haveri
Davangere
Chitradurga
Shimoga
Chickamagalur
Tumkur
Kolar
Udupi
Hassan
Bangalore
Rural / Urban
Mandya
D.Kannada
Madikeri
Mysore
Chamarajnagar

ನಕ್ಷೆ - ೧

ಎಂದರೆ ಇಬ್ಬರಿಗೂ ಐದು ವರ್ಷ ಮೀರಿರಲಾರದು. ಕ್ರಮೇಣ ಅವರಿಗೆ ವ್ಯಾಕರಣ, ಛಂದಸ್ಸು, ಅಲಂಕಾರ, ಸಮಸ್ತ ಕಲಾಸಮೂಹವನ್ನು ಕಲಿಸಿ ವಿದ್ಯಾಪರಿಪೂರ್ಣೆಯರನಾಗಿಯೂ ಅಪ್ಪರಿತರನ್ನಾಗಿಯೂ ಮಾಡಿದ. ಹೆಚ್ಚಿನ ಸಂದರ್ಭಗಳಲ್ಲಿ ಹಿರಿಯರೇ ಮನೆಯಲ್ಲಿ ಹೆಣ್ಣುಮಕ್ಕಳಿಗೆ ವಿದ್ಯೆಯನ್ನು ಕೊಡುತ್ತಿದ್ದರು ಎಂದು ಆದಿಪುರಾಣದಿಂದ ತಿಳಿದುಕೊಳ್ಳಬಹುದಾಗಿದೆ. ಚಿಕ್ಕ ದೊಡ್ಡ ಪಾಳೇಗಾರರು, ತುಂಡರಸರು, ನಾಯಕರಾದಿಗಳು ಸಹ, ಸಾಮ್ರಾಟರ ಮೇಲ್ಪಂಕ್ತಿಯನ್ನು ಅನುಕರಿಸಿ ತಮ್ಮ ಹೆಣ್ಮಕ್ಕಳಿಗೆಲ್ಲ ಒಳ್ಳೆಯ ಶಿಕ್ಷಣ ಕೊಡಲು ಯತ್ನಿಸುತ್ತಿದ್ದರು. ಕರ್ನಾಟಕದ ಮಹಮ್ಮದೀಯ ನಾರಿಯರೂ ಶಿಕ್ಷಣದಲ್ಲಿ ಹಿಂದಿರಲಿಲ್ಲ. ಹದಿಮೂರನೆಯ ಶತಮಾನದಲ್ಲಿ ಉತ್ತರಕನ್ನಡ ಜಿಲ್ಲೆಯ ಹೊನಾವರವನ್ನು ಸಂದರ್ಶಿಸಿದ ಅರಬ್ ಪ್ರವಾಸಿ, ಇಬ್ನ್-ಬತೂತನು ಅಲ್ಲಿ ಇಪ್ಪತ್ತೇಳು ಶಾಲೆಗಳನ್ನು ಕಂಡಿದ್ದ. ಅವುಗಳಲ್ಲಿ ಹದಿಮೂರು ಹುಡುಗಿಯರಿಗೆ ಮೀಸಲಾಗಿದ್ದವು.

ಹಿಂದಿನವರ ಶಿಕ್ಷಣ ಕ್ರಮವನ್ನು ಇಪ್ಪತ್ತನೆಯ ಶತಮಾನದ ಸ್ತ್ರೀ ಪುರುಷ ಭೇದವಿಲ್ಲದೇ ಶಾಲೆಗಳಲ್ಲಿ ಕೊಡುತ್ತಿರುವ ಶಿಕ್ಷಣ ಕ್ರಮಕ್ಕೆ ಹೋಲಿಸುವಂತೆ ಇಲ್ಲ. ತಾಂತ್ರಿಕ ಪ್ರಗತಿ ಕಾಣದಿದ್ದರೂ, ಸ್ವಯಂಪೂರ್ಣವಾಗಿದ್ದ ಹಿಂದಿನ ಗ್ರಾಮ ಜೀವನದಲ್ಲಿ 'ನೌಕರಿಗಾಗಿ ಶಿಕ್ಷಣ' ಎಂಬ ಕಲ್ಪನೆಯೇ ಇರಲಿಲ್ಲ. ವೃತ್ತಿ ಶಿಕ್ಷಣ ಎಂದು ಬೇರೆಯಾಗಿಯೇ ವಿಭಾಗಿಸಲು ಹೊರಟರೆ ಎಲ್ಲ ಕಸಬಿನವರಿಗೂ ಮನೆಯಲ್ಲಿಯೇ ಹಿರಿಯರು ಅಥವಾ ಜಾತಿ ಮುಖ್ಯಸ್ಥರು ಅಂಥಹಾ ಶಿಕ್ಷಣ ಒದಗಿಸುತ್ತಿದ್ದರು.

ಈ ಶತಮಾನದ ಕೊನೆಯಲ್ಲಿ ಭಾರತೀಯ ಮಹಿಳೆ, ಎಲ್ಲ ಕ್ಷೇತ್ರಗಳಲ್ಲಿ ಗಂಡಸರಿಗೆ ಸರಿಸಮಾನ ಶಿಕ್ಷಣ ಪಡೆದು ವಿವಿದ ರಂಗಗಳಲ್ಲಿ ಮುಂದುವರಿಯುತ್ತಿರುವುದು ನಿಜವಾಗಿಯೂ ಅಖಂಡ ದೇಶದ ಪ್ರಗತಿಯನ್ನು ಗಮನಿಸಿದರೆ ಈ ಪ್ರಗತಿಪರ ಮಹಿಳೆಯರ ಸಂಖ್ಯೆ ಅತ್ಯಲ್ಪವೆಂದೇ ಹೇಳಬೇಕು. ಇತ್ತೀಚಿನ ಸಮೀಕ್ಷೆಯಲ್ಲಿ ಪತಿಯ ಆಕಸ್ಮಿಕ ಮರಣದಿಂದಾಗಿ ನಿರ್ಗತಿಕರಾಗುವ ಹೆಣ್ಣುಮಕ್ಕಳ ಸಂಖ್ಯೆ ವರ್ಷಕ್ಕೆ ಹತ್ತು ಲಕ್ಷದಷ್ಟಿದೆ! ಆಪತ್ಕಾಲಕ್ಕೆ ಉದರಂಭರಣೆ ಮಾಡಿಕೊಳ್ಳುವಂತಹ ಯಾಮ ಶಿಕ್ಷಣವೂ ಹುಡುಗಿಯರಿಗೆ ದೊರೆಯುತ್ತಿಲ್ಲ. ಸರಕಾವಾದರೂ ಎಲ್ಲರೂ, ಎಲ್ಲ ಕಾಲಕ್ಕೂ ಬಯಸುವ ನೌಕರಿಗಳನ್ನು ಕೊಡಮಾಡುವ ಸ್ಥಿತಿಯಲ್ಲಿ ಇಲ್ಲ. ಶಿಕ್ಷಣದೊಂದಿಗೆ ಶ್ರಮ ಗೌರವದ ಕಲ್ಪನೆ ಸೇರ್ಪಡೆಯಾಗದೇ ದೈಹಿಕ ಶ್ರಮದಿಂದ ಜೀವಿಸುವ ವರ್ಗದ ಪುರುಷರಂತೆ, ಸ್ತ್ರೀಯರೂ ಅಕ್ಷರಾಭ್ಯಾಸ ದೊರೆತೊಡನೆ, ಕೌಟುಂಬಿಕ ವೃತ್ತಿಗಳನ್ನು ಕೈಗೊಳ್ಳುವುದನ್ನು ಕೀಳಾಗಿ ಭಾವಿಸುತ್ತಾರೆ. ಸರಕಾರೀ ನೌಕರಿಯೊಂದೇ ಸಮಾಜದಲ್ಲಿ ಮನ್ನಣೆ ತರುತ್ತದೆ ಎಂದು ನಂಬುವರೇ ಅಸಂಖ್ಯಾತರು. ಸಾಲದ್ದಕ್ಕೆ ನಗರ ಮತ್ತು ಗ್ರಾಮಗಳ ಜನಜೀವನದಲ್ಲಿ ಮಹದಂತರವಿದ್ದು ಈಗಲೂ ಅಂತರ ಹೆಚ್ಚುತ್ತಲೇ ಇದೆ. ನಗರದ ಹೆಂಗೆಳೆಯರಿಗಿದ್ದ ವೃತ್ತಿ ಅಪವೃತ್ತಿಗಳ ಅವಕಾಶವೊಂದೂ ಗ್ರಾಮಸ್ಥ ಮಹಿಳೆಯರಿಗೆ ಇಲ್ಲ. ಮಹಿಳೆಯರ ಮುನ್ನಡೆ ಎಂಬುದು ಪಟ್ಟಣಗಳ ಮಹಿಳೆಯರ ಮುನ್ನಡೆ ಮಾತ್ರವೇ

ಆಗಿದ್ದು ದೇಶದ ಕೋಟಿಗಟ್ಟಲೆ ಗ್ರಾಮೀಣ ಹೆಂಗೆಳೆಯರ ಸ್ಥಾನಮಾನ ಮತ್ತು ಶೈಕ್ಷಣಿಕ ಪ್ರಗತಿಗಳು ಅತ್ಯಂತ ನಿರಾಶಾದಾಯಕವಾಗಿಯೇ ಉಳಿದಿವೆ (ಕಾಮತ್, ೧೯೯೯).

**ಕೋಷ್ಟಕ ೨.೨. ಕರ್ನಾಟಕದಲ್ಲಿ ಮಹಿಳೆಯರ ಸಾಪೇಕ್ಷ ಪ್ರಮಾಣ**

**ಶೇಕಡಾ**

| ಕ್ರ. ಸಂ. | ವಿವರಗಳು | ದಶಕಗಳು | | |
|---|---|---|---|---|
| | | ೧೯೮೧ | ೧೯೯೧ | ೨೦೦೧ |
| ೧. | ಒಟ್ಟು ಜನಸಂಖ್ಯೆಯಲ್ಲಿ ಮಹಿಳೆಯರ ಪ್ರಮಾಣ | ೪೯.೦೪ | ೪೮.೯೭ | ೪೯.೦೮ |
| ೨. | ಒಟ್ಟು ದುಡಿಮೆಗಾರರಲ್ಲಿ ಮಹಿಳೆಯರ ಪ್ರಮಾಣ | ೩೦.೮೭ | ೩೪.೨೭ | ೩೫.೦೭ |
| ೩. | ಒಟ್ಟು ಕೃಷಿಕೂಲಿಕಾರರಲ್ಲಿ ಮಹಿಳೆಯರ ಪ್ರಮಾಣ | ೪೬.೯೪ | ೪೯.೭೫ | ೫೮.೧೯ |
| ೪. | ಅಕ್ಷರಸ್ಥರಲ್ಲಿ ಮಹಿಳೆಯರ ಪ್ರಮಾಣ | ೩೫.೧೫ | ೪೧.೭೦ | ೪೨.೧೦ |
| ೫. | ಅನಕ್ಷರಸ್ಥರಲ್ಲಿ ಮಹಿಳೆಯರ ಪ್ರಮಾಣ | ೬೦.೮೫ | ೬೨.೦೦ | ೬೩.೪೦ |
| ೬. | ದುಡಿಮೆ ಸಹಭಾಗಿತ್ವದಲ್ಲಿ ಮಹಿಳೆಯರ ಪ್ರಮಾಣ | ೨೫.೩೩ | ೨೯.೩೯ | ೩೧.೮೮ |

**ಮೂಲ: ಕರ್ನಾಟಕ ರಾಜ್ಯ ಸರಕಾರ ಜನಗಣತಿ ವರದಿಗಳು, ೧೯೯೧ ಮತ್ತು ೨೦೦೧.**

ಮೇಲಿನ ಕೋಷ್ಟಕದಲ್ಲಿ ಜನಸಂಖ್ಯೆಯಲ್ಲಿ ಮಹಿಳೆಯರ ಪ್ರಮಾಣವು ೧೯೮೧ರಿಂದ ೨೦೦೧ರ ಅವಧಿಯಲ್ಲಿ ಸುಮಾರು ಶೇ. ೮೯ರ ಮಟ್ಟದಲ್ಲಿ ಸ್ಥಿರವಾಗಿದೆ. ಒಟ್ಟು ದುಡಿಮೆಗಾರರಲ್ಲಿ ಮಹಿಳೆಯರ ಪ್ರಮಾಣವು ೧೯೮೧ರಲ್ಲಿ ಶೇ. ೩೦.೮೭ರಷ್ಟಿದ್ದುದು ೧೯೯೧ರಲ್ಲಿ ಶೇ. ೩೪.೨೭ಕ್ಕೆ ಮತ್ತು ೨೦೦೧ರಲ್ಲಿ ಶೇ. ೩೫.೦೨ಕ್ಕೆ ಏರಿಕೆಯಾಗಿದೆ. ಇದೇ ರೀತಿ ಕೃಷಿಕೂಲಿಕಾರರಲ್ಲಿ ಮಹಿಳೆಯರ ಪ್ರಮಾಣವು ೨೦೦೧ರಲ್ಲಿ ಶೇ. ೫೮.೧೯ರಷ್ಟಾಗಿದೆ. ಒಟ್ಟು ಕೃಷಿ ಕೂಲಿಕಾರರಲ್ಲಿ ೨೦೦೧ಕ್ಕಾಗುವಾಗ ೫೮.೧೯ರಷ್ಟಾಗಿದೆ. ಮಹಿಳೆಯರ ದುಡಿಮೆ ಸಹಭಾಗಿತ್ವ ಪ್ರಮಾಣವು ೨೦೦೧ರಲ್ಲಿ ೩೧.೮೮ಕ್ಕೇರಿದೆ. ಒಟ್ಟು ದುಡಿಮೆಗಾರರಲ್ಲಿರುವ ಮಹಿಳೆಯರ ಪ್ರಮಾಣಕ್ಕಿಂತ ಕೂಲಿಕಾರರಲ್ಲಿರುವ ಮಹಿಳೆಯರ ಪ್ರಮಾಣ ಅಧಿಕವಾಗಿದೆ.

## ೨.೭ ದಕ್ಷಿಣಕನ್ನಡ ಜಿಲ್ಲೆಯಲ್ಲಿ ಶಿಕ್ಷಣಕ್ಕೆ ಮಹಿಳೆಯರ ಕೊಡುಗೆ

ಭಾರತದಲ್ಲಿ ದಕ್ಷಿಣಕನ್ನಡದ ಮಹಿಳೆಯರ ಪಾತ್ರವು ವಿಶಿಷ್ಟವಾದುದು. ರಾಜಕೀಯ, ಆರ್ಥಿಕ, ಸಾಂಸ್ಕೃತಿಕ ಹಾಗೂ ಶೈಕ್ಷಣಿಕ ಕ್ಷೇತ್ರದಲ್ಲಿ ಮಹಿಳೆಯ ಪಾತ್ರವು ಮಹತ್ತರವಾದುದು. ದಕ್ಷಿಣಕನ್ನಡವು ಭಿನ್ನ ಭಾಷೆ, ಆಚಾರ ಹಾಗೂ ಸಂಸ್ಕೃತಿಯು ಮೇಳೈಸಿರುವ ಸಂಗಮ. ಕರಾವಳಿ ಹಾಗೂ ಮಲೆನಾಡ ಸೆರಗಿನ ನಡುವಿರುವ ಇದು ಅತಿ ಸಂಪನ್ಮೂಲ ಜಿಲ್ಲೆಯಾಗಿದೆ. ಆರ್ಥಿಕವಾಗಿ ಉತ್ತಮ ಸ್ತರದಲ್ಲಿರುವ ಈ ಜಿಲ್ಲೆಯಲ್ಲಿ ಅಕ್ಷರಸ್ಥರ ಸಂಖ್ಯೆ ಅತೀ ಹೆಚ್ಚು. ಇಲ್ಲಿ ಬಹಳಷ್ಟು ವಿದ್ಯಾಸಂಸ್ಥೆಗಳು ವಿವಿಧ ಕೋರ್ಸುಗಳ ಕುರಿತು ಬೋಧನೆ ನೀಡುತ್ತಿವೆ. ಹೆಚ್ಚಿನ ಮಹಿಳೆಯರು ಶಿಕ್ಷಣದಲ್ಲಿ ಮುಂದಿದ್ದಾರೆ. (ನಕ್ಷೆ-೨)

ದಕ್ಷಿಣಕನ್ನಡ ಜಿಲ್ಲೆಯ ಕೇಂದ್ರ ಬಿಂದುವಾಗಿರುವ ಮಂಗಳೂರು ರಾಜ್ಯದಲ್ಲೇ ಬೆಳೆಯುತ್ತಿರುವ ಒಂದು ವಾಣಿಜ್ಯ ನಗರ. ೧೯ನೇ ಶತಮಾನದ ಕೊನೆ ಮತ್ತು ೨೦ನೇ ಶತಮಾನದ ಆದಿಯಲ್ಲಿ ಕರಾವಳಿ ತೀರಕ್ಕೆ ಪ್ರವೇಶಿಸಿದ ಮಿಶನರಿಗಳು ಇಲ್ಲಿನ ಭೌಗೋಳಿಕತೆಯನ್ನು ಸರಿಯಾದ ನೆಲೆಯಲ್ಲಿ ಅರ್ಥೈಸಿಕೊಂಡರು. ಮತ ಪ್ರಚಾರಕ್ಕಾಗಿ ಆಗಮಿಸಿದವರು ಶಿಕ್ಷಣದ ಕಡೆಗೆ ಮೊದಲ ಆದ್ಯತೆ ಕೊಟ್ಟಿದ್ದರಿಂದ ಪ್ರಾಥಮಿಕವಾಗಿ ಶಿಕ್ಷಣ ಸಂಸ್ಥೆಗಳು ಸ್ಥಾಪನೆಯಾದವು.

ಮಂಗಳೂರಿನ ಉತ್ತರದ ಗುಡ್ಡದ ತುದಿಗಳಲ್ಲಿ ಸ್ಥಾಪಿಸಿದ ಶಿಕ್ಷಣ ಸಂಸ್ಥೆಗಳೆಲ್ಲ ಇಂದು ಎತ್ತರೆತ್ತರಕ್ಕೆ ವಿಸ್ತಾರವಾಗಿವೆ. ಸಾಂಪ್ರದಾಯಿಕ ಶಿಕ್ಷಣ ಕ್ರಮಕ್ಕೆ ಹೆಚ್ಚು ಒತ್ತುಕೊಟ್ಟು ಪಟ್ಟಣ ಕೇಂದ್ರ ಮಾತ್ರವಲ್ಲ, ಹಳ್ಳಿಯ ಮೂಲೆ ಮೂಲೆಗಳಲ್ಲಿಯೂ ಶಿಕ್ಷಣ ಸಂಸ್ಥೆಗಳು ಸ್ಥಾಪನೆಗೊಂಡವು. ಜ್ಞಾನ ಎಂಬ ಪರಿಕಲ್ಪನೆಯಲ್ಲಿದ್ದ ಚಿಂತನೆ 'ಶಿಕ್ಷಣ' ಎಂಬ ಪರಿಕಲ್ಪನೆ ತಂದು ಬರೆಯಲು, ಓದಲು ಕಲಿಸುವುದರೊಂದಿಗೆ ವ್ಯಾವಹಾರಿಕ ಬದುಕಿನ ಇತಿಮಿತಿಗಳನ್ನು ನೇರ್ಪುಗೊಳಿಸಲಾಯಿತು. ಮೇಲ್ವರ್ಗ ಮತ್ತು ಮೇಲ್ಜಾತಿಯವರಿಗೆ ಮಾತ್ರ ಅವಕಾಶವಿದ್ದ ಅಕ್ಷರದ ಅರಿವನ್ನು ಸಾರ್ವತ್ರಿಕಗೊಳಿಸಿದ ಹಿರಿಮೆ ಮಿಶನರಿಗಳಿಗೆ ಸಲ್ಲುತ್ತದೆ.

ದೇವಾಲಯದ ಮಠಮಾನ್ಯಗಳ ಅಧೀನದಲ್ಲಿದ್ದ ಅರಿವಿನ ಆಗರವನ್ನು ತರಗತಿ ಕೋಣೆಯೊಳಗೆ ಗ್ರಹಿಸಲಾಯಿತು. ಹೀಗೆ ಸ್ಥಿತ್ಯಂತರಗೊಳಿಸುವಾಗ ಹೆಣ್ಣು ಮಕ್ಕಳ ಬಗೆಗೂ ಗಮನ ಹರಿಸಲಾಯಿತು. ವಿದ್ಯೆ ಕಲಿಸುವವರು ಮಹಿಳೆಯರಾದದ್ದೇ ವಿಶೇಷ. ಆಗಿನ ಕಾಲದಲ್ಲಿ ಹೆಣ್ಣು ಮಕ್ಕಳಿಗೂ ಶಿಕ್ಷಣದ ಅವಶ್ಯಕತೆ ಗ್ರಹಿಸಿದುದರಿಂದ ಹಲವಾರು ನಿಷೇಧಗಳ ಮಧ್ಯೆಯೂ ಹೆಣ್ಣು ಮಕ್ಕಳು ಶಿಕ್ಷಣದ ದಿಕ್ಕಿನೆಡೆಗೆ ಸಾಗಿದರು. ಪರಿಣಾಮವಾಗಿ ಕರಾವಳಿ ಅಭಿವೃದ್ಧಿಯಲ್ಲಿ ಮಹಿಳೆಯರೂ ತಮ್ಮ ಕೊಡುಗೆ ನೀಡಲು ಸಾಧ್ಯವಾಯಿತು. ಶಿಕ್ಷಣದ ಅರಿವು ಹುಟ್ಟಿಸಿದ ಪ್ರಜ್ಞೆ ಹೊಸತನಗಳಿಗೆ ಹೆಣ್ಣುಮಕ್ಕಳು ಒಗ್ಗಿಕೊಳ್ಳುವಂತೆ ಮಾಡಿತು.

**ಕೋಷ್ಟಕ ೨.೩. ದಕ್ಷಿಣ ಕನ್ನಡ ಜಿಲ್ಲೆಯ ಸಾಮಾನ್ಯ ಮಾಹಿತಿ**

| | |
|---|---|
| ಒಟ್ಟು ಭೌಗೋಳಿಕ ಪ್ರದೇಶ ಹೆಕ್ಟೇರುಗಳಲ್ಲಿ | 4,77,149 |
| ಒಟ್ಟು ಗಂಡಸರ ಸಂಖ್ಯೆ | 9.38,434 |
| ಒಟ್ಟು ಹೆಂಗಸರ ಸಂಖ್ಯೆ | 9,59,296 |
| ಒಟ್ಟು ಜನಸಂಖ್ಯೆ | 18,97,730 |
| ಒಟ್ಟು ಪರಿಶಿಷ್ಟ ಜಾತಿ ಗಂಡಸರ ಸಂಖ್ಯೆ | 65,818 |
| ಒಟ್ಟು ಪರಿಶಿಷ್ಟ ಜಾತಿ ಹೆಂಗಸರ ಸಂಖ್ಯೆ | 65,342 |
| ಒಟ್ಟು ಪರಿಶಿಷ್ಟ ಜಾತಿ ಜನಸಂಖ್ಯೆ | 1,31,160 |
| ಒಟ್ಟು ಪರಿಶಿಷ್ಟ ಪಂಗಡ ಗಂಡಸರ ಸಂಖ್ಯೆ | 31,579 |
| ಒಟ್ಟು ಪರಿಶಿಷ್ಟ ಪಂಗಡ ಹೆಂಗಸರ ಸಂಖ್ಯೆ | 31,357 |
| ಒಟ್ಟು ಪರಿಶಿಷ್ಟ ಪಂಗಡ ಜನಸಂಖ್ಯೆ | 62,396 |
| ಲಿಂಗ ಅನುಪಾತ | 1022 |
| ಸಾಕ್ಷರತಾ ದರ | 83.4% |

**ಮೂಲ: ಕರ್ನಾಟಕ ರಾಜ್ಯ ಸರಕಾರ ಜನಗಣತಿ ವರದಿಗಳು, ೨೦೦೧.**

ಅರಿವಿನ ಆಗರವಾಗಿದ್ದ ಶಿಕ್ಷಣ ವ್ಯಾಪಾರದ ಸರಕಾಗಿ ಇಂದು ಮಾರುಕಟ್ಟೆಯಲ್ಲಿ ಬಿಕರಿಗೊಳ್ಳುತ್ತಿರುವುದು ವರ್ತಮಾನದ ವ್ಯಂಗ್ಯ. ಸ್ಪರ್ಧಾತ್ಮಕವಾಗಿ ಬೆಳೆಯುತ್ತಿರುವ ವೃತ್ತಿ ಶಿಕ್ಷಣ. ಕಾಲೇಜುಗಳು, ಪ್ರಾಥಮಿಕ, ಪ್ರೌಢಶಾಲೆಗಳು, ವೃತ್ತಿಪರಗಳನ್ನು ಬೋಧಿಸುವಲ್ಲಿ ಶಿಕ್ಷಕಿಯಾಗಿ, ಶಿಕ್ಷಕೇತರರಾಗಿ ಮಹಿಳೆಯರೂ ಇದ್ದಾರೆ. ದಿನದಿಂದ ದಿನಕ್ಕೆ ಹೆಚ್ಚುತ್ತಲೇ ಇರುವ ಖಾಸಗಿ ಶಿಕ್ಷಣ ಸಂಸ್ಥೆಗಳಂತೆ ತರಬೇತಿಯ ತರಗತಿಗಳೂ ಹೆಚ್ಚುತ್ತಿವೆ. ತರಬೇತಿ ಸಂಸ್ಥೆಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರಿದ್ದಾರೆ. ಪರವೂರುಗಳಿಂದ ಬರುವ ವಿದ್ಯಾರ್ಥಿಗಳಿಗೆ ವಸತಿ ಸೌಕರ್ಯ ನಡೆಸುವವರು ಹೆಣ್ಣುಮಕ್ಕಳೇ ಆಗಿದ್ದಾರೆ (ಜ್ಯೋತಿ, ೨೦೧೦).

ಕರ್ನಾಟಕದ ಇತರ ಪ್ರದೇಶಗಳಿಗೆ ಹೋಲಿಸಿದರೆ ದಕ್ಷಿಣ ಕನ್ನಡದ ಮಹಿಳೆಯರು ಅಭಿವೃದ್ಧಿ ಹೊಂದಿದ್ದಾರೆ. ಶಿಕ್ಷಣದ ಎಲ್ಲಾ ಕ್ಷೇತ್ರದಲ್ಲಿಯೂ ಮಹಿಳಾ ವಿದ್ಯಾಭ್ಯಾಸದ ಮಟ್ಟವು ಹೆಚ್ಚಾಗಿದೆ. ವಿಶ್ವವಿದ್ಯಾಲಯದಲ್ಲಿ ಪುರುಷರಿಗಿಂತ ಮಹಿಳಾ ವಿದ್ಯಾರ್ಥಿಗಳ ಸಂಖ್ಯೆಯೇ ಹೆಚ್ಚಿದೆ.

ಶಿಕ್ಷಣ, ವೈದ್ಯಕೀಯ ಸಾಮಾಜಿಕ ಸೇವೆಗಳಲ್ಲಿ ಉದ್ಯೋಗ ಕ್ಷೇತ್ರದಲ್ಲಿ ಮಹಿಳೆಯರ ಪಾಲು ಹೆಚ್ಚಾಗುತ್ತಿದೆ. ಒಂದು ಕಡೆಯಿಂದ ಮಹಿಳೆಯು ಉತ್ತಮ ಉದ್ಯೋಗ ಶಿಕ್ಷಣವನ್ನು ಪಡೆಯುತ್ತಿದ್ದರೆ ಇನ್ನೊಂದೆಡೆ ಮಹಿಳೆಯು ಅನೇಕ ಸಮಸ್ಯೆ ಮತ್ತು ನೋವನ್ನು ಅನುಭವಿಸುತ್ತಿದ್ದಾಳೆ. ಹೆಚ್ಚಿನ ಮಹಿಳೆಯರು ಆಹಾರ ಬಟ್ಟೆಬರೆ ಮತ್ತು ವಸತಿಗಳ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ. ಕಾರ್ಮಿಕ ಸಂಘಟನೆಗಳಲ್ಲಿ ಮಹಿಳೆಯರನ್ನು ಅಗತ್ಯಕ್ಕಿಂತ ಹೆಚ್ಚು ದುಡಿಸುತ್ತಿದ್ದಾರೆ. ಮಹಿಳಾ ದೌರ್ಜನ್ಯಗಳು ಹೆಚ್ಚುತ್ತಿವೆ. ವರದಕ್ಷಿಣೆಯ ಕಿರುಕುಳವು ದಿನದಿಂದ ದಿನಕ್ಕೆ ಹೆಚ್ಚುತ್ತಿದೆ. ಈ ಎಲ್ಲಾ ದೌರ್ಜನ್ಯಗಳಿಂದಾಗಿ ದಕ್ಷಿಣಕನ್ನಡ ಜಿಲ್ಲೆಯಲ್ಲಿ ಮಹಿಳೆಯರು ದಿನದಿಂದ ದಿನಕ್ಕೆ ಕಷ್ಟ ಅನುಭವಿಸಬೇಕಾಗುತ್ತದೆ. ಈ ಎಲ್ಲಾ ಪರಿಸ್ಥಿತಿಗಳನ್ನು ಅರ್ಥಮಾಡಿ ಕೊಂಡು ಸಮಾಜದಲ್ಲಿ ಬದಲಾವಣೆಯ ಒಂದು ಪಕ್ಷಿನೋಟವನ್ನು ತರಬೇಕಾಗಿದೆ. ಖಾಸಗಿ ಮತ್ತು ಆಂತರಿಕ ವಲಯಗಳಲ್ಲಿಯೂ ಈ ಜಿಲ್ಲೆಯ ಮಹಿಳೆಯರಲ್ಲಿ ಭಿನ್ನತೆಯನ್ನು ಕಾಣಬಹುದು. ಸಾಮಾಜಿಕ ಸಂಬಂಧಗಳು, ಕುಟುಂಬ ಶಿಕ್ಷಣ, ರಾಜಕೀಯ, ಮಾಧ್ಯಮ, ಆರೋಗ್ಯ, ಧರ್ಮ ಮುಂತಾದವುಗಳು ಶಿಕ್ಷಣದಿಂದಾಗಿ ಇನ್ನೂ ಬದಲಾಗಬೇಕಾಗಿದೆ.

*****

## ಉಲ್ಲೇಖಗಳು


1. ಶೆಣೈ ಗೀತಾ (2007) 'ಸ್ತ್ರೀ ವಿಮುಕ್ತಿ ಚಿಂತನೆ'. ಅಖಿಲ ಕರ್ನಾಟಕ ಲೇಖಕಿಯರ ಸಮ್ಮೇಳನ, ಮಂಡ್ಯ.
2. ಅನ್ನಪೂರ್ಣೇಶ್ವರಿ ಎನ್. ಒಡೆಯರ್ ಡಿ. (2003) 'ಮಹಿಳಾ ಅಧ್ಯಯನಗಳು, ಆರ್ಥಿಕ ನೆಲೆ ಮತ್ತು ಆಯಾಮಗಳು'. ಮಾನವ ಅಭಿವೃದ್ಧಿ ಅಧ್ಯಯನ ಕೇಂದ್ರ, ಮೈಸೂರು.
3. ಮುಗಳಿ ರಂ.ಶೀ. (1972) 'ಶಿಕ್ಷಣದ ಮುನ್ನಡೆ'. ಸಾಹಿತ್ಯ ಭಂಡಾರ, ಬೆಂಗಳೂರು.
4. ಅನ್ನಪೂರ್ಣೇಶ್ವರಿ ಎನ್. ಒಡೆಯರ್ (2002) 'ಮಹಿಳಾ ಶಿಕ್ಷಣ ಮತ್ತು ಅಭಿವೃದ್ಧಿ'. ಮಾನವ ಅಭಿವೃದ್ಧಿ ಆಧ್ಯಯನ ಕೇಂದ್ರ, ಮೈಸೂರು.
5. ಕಾಮತ್ ಜ್ಯೋತ್ಸ್ನಾ (1999) 'ಮಹಿಳೆ ಒಂದು ಅಧ್ಯಯನ'. ನವಕರ್ನಾಟಕ ಪ್ರಕಾಶನ.
6. ಹೇಮಲತಾ ಎಚ್.ಎನ್. (2006) 'ಮಹಿಳಾ ಅಧ್ಯಯನಗಳು' ಮೂರ್ತಿ ಪ್ರಕಾಶನ, ಮೈಸೂರು.
7. ನಾಜ್‌ನೀನ್ ಬೇಗಮ್ (2000) 'ಗ್ರಾಮೀಣ ಬದುಕು ಮತ್ತು ಮಹಿಳೆ', ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
8. ಶಾಂತಾ ಇಮ್ರಾಪುರ (2001) 'ಧರ್ಮ, ಮಹಿಳೆ ಮತ್ತು ಸಮಾಜ', ಚೇತನಾ ಪ್ರಕಾಶನ, ಧಾರವಾಡ.
9. ಜ್ಯೋತಿ (2010) 'ಕರಾವಳಿ ಉದ್ದಿಮೆ ಮತ್ತು ಮಹಿಳೆ', ಪ್ರಜಾವಾಣಿ. ೫-೬-೨೦೧೦
10. ನಾಯಕ ಹಾ.ಮಾ. (1971) 'ಸ್ತ್ರೀ ಮತ್ತು ಸಮಾಜ'. ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು.
11. ಇಂದಿರಾ ಆರ್. (2002) 'ಮಹಿಳೆ, ಸಮಾಜ ಮತ್ತು ಸಂಸ್ಕೃತಿ'. ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.
12. ಪ್ರೀತಿ ಶುಭಚಂದ್ರ (2002) 'ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು'. ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.
13. ಬಾಬುರಾವ್ ಎಮ್. (2005) 'ಮಹಿಳಾ ಸಬಲೀಕರಣ'. ಲಕ್ಷ್ಮೀ ಪ್ರಕಾಶನ, ಬೆಂಗಳೂರು.
14. ಅಬೂಬ್ಬಕರ್ ಸಾರಾ (2007) 'ಸಾಹಿತ್ಯ, ಸಂಸ್ಕೃತಿ ಮತ್ತು ಮಹಿಳೆ'. ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

15. ಕೃಷ್ಣಮೂರ್ತಿ (1984) 'ಭಾರತೀಯ ನಾರಿ ಮತ್ತು ಸಮಾನತೆ'. ಐಬಿಎಚ್ ಪ್ರಕಾಶನ, ಬೆಂಗಳೂರು.

16. ಉಷಾ ಎಂ. (2004) 'ಮಹಿಳಾ ಚಳುವಳಿ ಮತ್ತು ವಿಷಯಗಳು'. ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

17. ವನಜ ವೆಂ. (2003) 'ಹೆಣ್ಣು–ಹಕ್ಕು–ಹೋರಾಟ'. ಅಭಿರುಚಿ ಪ್ರಿಂಟರ್ಸ್, ಮೈಸೂರು.

18. ವಿ. ಬಾಸಿಲ್ ಹನ್ಸ್ (2010) 'ವಿಮೆನ್ ಹೆಲ್ತ್ ಆಂಡ್ ಪ್ರೊಡಕ್ಟಿವಿಟಿ, ಸಿದ್ಧಾರ್ಥ್ ಸರ್‌ಕಾರ್ ಮತ್ತು ಐಸಾಕ್ ವಾಕು ಅಚೀಂಪಾಂಗ್ (ಸಂ.), ಜೆಂಡರ್ ಆಂಡ್ ಪವರ್ಟಿ ಆಂಡ್ ಸಸ್ಟೇನೆಬಲ್ ಲೈವ್ಲಿಹುಡ್, ಎರೈಸ್ ಡಿಸ್ಟ್ರಿಬ್ಯೂಟರ್ಸ್, ನ್ಯೂಡೆಲ್ಲಿ, ಪ್ರ. 231-249

19. ನಹೀದ್ ಸರಿಖಾನಿ ಮತ್ತು ಎಸ್. ಯಶೋದ, ಜಾಬ್ ಸ್ಯಾಟಿಸ್‌ಫ್ಯಾಕ್ಷನ್ ಅಮಂಗ್ ಫೀಮೇಲ್ ಟೀಚರ್ಸ್, ಸಿದ್ಧಾರ್ಥ್ ಸರ್‌ಕಾರ್ ಮತ್ತು ಐಸಾಕ್ ವಾಕು ಅಚೀಂಪಾಂಗ್ (ಸಂ.), ಜೆಂಡರ್ ಆಂಡ್ ಪವರ್ಟಿ ಆಂಡ್ ಸಸ್ಟೇನೆಬಲ್ ಲೈವ್ಲಿಹುಡ್, ಎರೈಸ್ ಡಿಸ್ಟ್ರಿಬ್ಯೂಟರ್ಸ್, ನ್ಯೂಡೆಲ್ಲಿ, ಪ್ರ. 180-191.

# ಅಧ್ಯಾಯ – ೩

## ಉನ್ನತ ಶಿಕ್ಷಣದಲ್ಲಿ ಮಹಿಳೆ

೩.೧ ಮಹಿಳಾ ಉನ್ನತ ಶಿಕ್ಷಣದಲ್ಲಿ ಸಂತ ಆಗ್ನೆಸ್ ಕಾಲೇಜಿನ ಐತಿಹಾಸಿಕ ನೋಟ

೩.೨ ಮಹಿಳೆ ಮತ್ತು ಉನ್ನತ ಶಿಕ್ಷಣ ನೀತಿಗಳು

೩.೩ ಉನ್ನತ ಶಿಕ್ಷಣದಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆಗೆ ಇರುವ ಅಡೆತಡೆಗಳು

೩.೪ ಉನ್ನತ ಶಿಕ್ಷಣದ ವಾಣಿಜ್ಯೀಕರಣ

೩.೫ ಉನ್ನತ ಶಿಕ್ಷಣ ಕ್ಷೇತ್ರದ ಏಳುಬೀಳುಗಳು

# ಅಧ್ಯಾಯ – ೩

# ಉನ್ನತ ಶಿಕ್ಷಣದಲ್ಲಿ ಮಹಿಳೆ

ಮಹಿಳೆಯರು ಭಾರತದ ಜನಸಂಖ್ಯೆಯಲ್ಲಿ ಗಣನೀಯವಾದ ಪ್ರಮಾಣದಲ್ಲಿದ್ದಾರೆ. ೨೦೦೧ನೇ ಜನಗಣತಿಯ ಪ್ರಕಾರ ನಮ್ಮ ದೇಶದ ಒಟ್ಟು ಜನಸಂಖ್ಯೆಯಲ್ಲಿ ಶೇಕಡಾ ೪೮ರಷ್ಟು ಮಹಿಳೆಯರಾಗಿರುತ್ತಾರೆ. ಸ್ವಾತಂತ್ರ್ಯಾನಂತರ ಭಾರತದ ಮುಖ್ಯ ನೀತಿ ಲಿಂಗ ಸಮಾನತೆ ಸಾಧಿಸುವುದು ಮತ್ತು ಮಹಿಳೆಯರ ಹಕ್ಕುಗಳನ್ನು ರಕ್ಷಿಸುವುದಾಗಿರುತ್ತದೆ. ಇದಕ್ಕೆ ಸಮಾನ ಶಿಕ್ಷಣವು ಅಗತ್ಯವಾಗಿದೆ. ನಮ್ಮ ಸಂವಿಧಾನವು ಮಹಿಳೆಯರಿಗೆ ಪುರುಷರೊಂದಿಗೆ ಸಮಾನ ಅವಕಾಶಗಳನ್ನು ಒದಗಿಸುವುದಕ್ಕಾಗಿ ಹಲವಾರು ಲಿಖಿತ ವಿಧಿಗಳನ್ನು ಜಾರಿಗೊಳಿಸಿದೆ. ಆದರೆ ಮಹಿಳೆಯರು ದೇಶವು ಸ್ವತಂತ್ರಗೊಂಡು ೬೦ ವರ್ಷ ದಾಟಿದರೂ ಹೆಚ್ಚಿನ ಸಂಖ್ಯೆಯಲ್ಲಿ ಶಿಕ್ಷಣ ವಂಚಿತರಾಗಿದ್ದಾರೆ. ಅದರಲ್ಲೂ ಉನ್ನತ ಶಿಕ್ಷಣ ಕ್ಷೇತ್ರದಲ್ಲಿ ಇದಕ್ಕೆ ಪ್ರಮುಖ ಕಾರಣಗಳು ಬಡತನ, ಸಾಮಾಜಿಕ ಅಂಶಗಳು, ಮೂಢನಂಬಿಕೆ, ಹುಡುಗಿಯರ ಬಗ್ಗೆ ಹೆತ್ತವರಿಗೆ ಇರುವ ಅಸಡ್ಡೆ ಇತ್ಯಾದಿ.

ಇತ್ತೀಚಿನ ವರ್ಷಗಳಲ್ಲಿ ನಮ್ಮ ದೇಶದಲ್ಲಿ ಮಹಿಳೆಯರ ಶಿಕ್ಷಣಕ್ಕೆ ಹೆಚ್ಚಿನ ಮಹತ್ವ ದೊರಕುತ್ತದೆ. ಲಿಂಗ ಸಮಾನತೆ ಮತ್ತು ಶಿಕ್ಷಣವು ರಾಷ್ಟ್ರದ ಅಭಿವೃದ್ಧಿಯಲ್ಲಿ ಒಂದು ಚರ್ಚೆಯ ವಿಷಯವಾಗಿದೆ. ಶಿಕ್ಷಣವು ಅಭಿವೃದ್ಧಿಯ ಮೂಲವಾಗಿದೆ ಎಂಬ ಅಂಶವನ್ನು ಸರಕಾರವು ಮನದಟ್ಟು ಮಾಡಿಕೊಂಡಿರುವುದರಿಂದ ಸರಕಾರಿ ನೀತಿಯನ್ನು ಅನುಷ್ಠಾನಕ್ಕೆ ತರುವಾಗ ಮಹಿಳಾ ಶಿಕ್ಷಣಕ್ಕೆ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಡಲಾಗುತ್ತಿದೆ (ಪವರ್ ಪಂಡ, ೧೯೯೬). ಪ್ರಪ್ರಥಮವಾಗಿ ಮಹಿಳಾ ಕಾಲೇಜಿನ ಬಗ್ಗೆ ಹೆಚ್ಚು ಆಸಕ್ತಿ ತೋರಿಸಿದವರೆಂದರೆ ಸಂತ ಆಗ್ನೆಸ್ ಕಾಲೇಜಿನವರು.

## ೩.೧ ಮಹಿಳಾ ಉನ್ನತ ಶಿಕ್ಷಣದಲ್ಲಿ ಸಂತ ಆಗ್ನೆಸ್ ಕಾಲೇಜಿನ ಐತಿಹಾಸಿಕ ನೋಟ

ಸಂತ ಆಗ್ನೆಸ್ ಕಾಲೇಜು, ಮಂಗಳೂರು, ೧೯೨೦ರಲ್ಲಿ ಸ್ಥಾಪನೆಯಾಗಿದ್ದು, ಮಂಗಳೂರಿನಲ್ಲಿ ಸ್ಥಾಪನೆಯಾದ ಪ್ರಥಮ ಮಹಿಳಾ ಕಾಲೇಜು ಇದಾಗಿದೆ. ದೇಶದ ಕೆಲವು ನಗರಗಳಲ್ಲಿ ಮಾತ್ರ ಸ್ತ್ರೀ ಮತ್ತು ಪುರುಷರಿಗಾಗಿ ಉನ್ನತ ಶಿಕ್ಷಣ ದೊರೆಯುತ್ತಿತ್ತು. ಮಂಗಳೂರಿನಲ್ಲಿ ಕೇವಲ ಒಂದು ಸರಕಾರಿ ಕಾಲೇಜು ಸಹಶಿಕ್ಷಣವನ್ನು ಹೊಂದಿದ್ದು ಆ ಕಾಲೇಜಿಗೆ ಹೆತ್ತವರು ತಮ್ಮ ಮಕ್ಕಳನ್ನು ಕಳುಹಿಸಲು ನಿರಾಕರಿಸುತ್ತಿದ್ದರು.

ನಂತರ ಮಹಿಳೆಯರಿಗೂ ಉನ್ನತ ಶಿಕ್ಷಣ ದೊರಕಲೆಂದು ಕ್ರಿಶ್ಚಿಯನ್ ಧರ್ಮಭಗಿನಿ, ಅಪೋಸ್ಟೊಲಿಕ್ ಕಾರ್ಮಲ್ ಸಂಸ್ಥೆಯ ಹಿರಿಯ ಚೇತನ 'ಮದರ್ ಅಲೋಶಿಯಾ' ರವರ ಮಾರ್ಗದರ್ಶನದಂತೆ ಉನ್ನತ ಶಿಕ್ಷಣ ಸಂಸ್ಥೆ ಸ್ಥಾಪನೆಯಾಯಿತು. ಅವರ ನೇತೃತ್ವದಂತೆ 'ಸಂತ ಆನ್ಸ್' ಶಾಲೆಯಲ್ಲಿ ೯ ವಿದ್ಯಾರ್ಥಿನಿಯರಿಗೆ ಶಿಕ್ಷಣವನ್ನು ಪ್ರಾರಂಭಿಸಲಾಯಿತು. ನಂತರ ಮಂಗಳೂರಿನ ಬೆಂದೂರು ಎಂಬಲ್ಲಿ ೯ ಎಕರೆ ಜಮೀನಿನಲ್ಲಿ ಸಂತ ಆಗ್ನೆಸ್ ಕಾಲೇಜನ್ನು ಸ್ಥಾಪಿಸಲಾಯಿತು. ಮಿಸ್ ವಾಯ್ಲೆಟ್ ಲೀಕ್ಸ್ ಎಂಬವರು ಪ್ರಪ್ರಥಮ ಪ್ರಾಂಶುಪಾಲರಾಗಿ ನೇಮಿಸಲ್ಪಟ್ಟಿದ್ದರು. ಮದ್ರಾಸಿನವರಾಗಿದ್ದ ಇವರು ಸುಮಾರು ೧೦ ತಿಂಗಳ ಕಾಲ ಪ್ರಾಂಶುಪಾಲರಾಗಿ ಕಾರ್ಯನಿರ್ವಹಿಸಿದ್ದರು. ಮೊದಲಿಗೆ ೯ ವಿದ್ಯಾರ್ಥಿಗಳಿಗೆ ಇತಿಹಾಸ, ನ್ಯಾಯಶಾಸ್ತ್ರ ಮತ್ತು ಫ್ರೆಂಚ್ ವಿಷಯಗಳನ್ನು ಕಲಿಸಲಾಯಿತು. ನಂತರ ಇದು ಕ್ರಮೇಣ ಬೆಳೆಯುತ್ತಾ ಬಂದು ೧೯೯೫ರಲ್ಲಿ ೨,೫೦೦ ವಿದ್ಯಾರ್ಥಿಗಳು ಮತ್ತು ೧೧೧ ಸಿಬ್ಬಂದಿಗಳು ಇದ್ದರು.



ನಂತರ ಈ ಕಾಲೇಜಿನಲ್ಲಿ ಮಹಿಳೆಯರಿಗಾಗಿ ಅನೇಕ ವೃತ್ತಿಪರ ಕೋರ್ಸುಗಳನ್ನು ತೆರೆದು ಅಭಿವೃದ್ಧಿಪಡಿಸಲಾಯಿತು. ಅಲ್ಲಿ ಶಿಕ್ಷಣ ಪಡೆದ ಹಲವಾರು ವಿದ್ಯಾರ್ಥಿಗಳು ಮುಂದೆ ನಾನಾ ರೀತಿಯ ಸರಕಾರಿ ಉನ್ನತ ಹುದ್ದೆಗಳನ್ನು ಅಲಂಕರಿಸಿದ್ದಾರೆ, ದೇಶ ವಿದೇಶಗಳಲ್ಲಿ ಉತ್ತಮ ಉದ್ಯೋಗ ದೊರಕಿಸಿಕೊಂಡಿದ್ದಾರೆ. ಹಲವಾರು ವಿದ್ಯಾರ್ಥಿಗಳು ರಾಜಕೀಯ ರಂಗದಲ್ಲಿ, ಸಿನಿಮಾ ಕ್ಷೇತ್ರದಲ್ಲಿ ಹಾಗೂ ಸಮಾಜ ಸೇವಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಇನ್ನೂ ಹಲವಾರು ವಿದ್ಯಾರ್ಥಿನಿಯರು ರಾಷ್ಟ್ರ ಹಾಗೂ ಅಂತರಾಷ್ಟ್ರೀಯ ಮಟ್ಟದಲ್ಲಿ ಅತ್ಯುನ್ನತ ಹುದ್ದೆಗಳಲ್ಲಿದ್ದಾರೆ. ಕಾಲೇಜು ಸ್ಥಾಪನೆಯಾದ ವರ್ಷದಿಂದ ಇಂದಿನವರೆಗೂ ಸಿಬ್ಬಂದಿಗಳು ಮತ್ತು ವಿದ್ಯಾರ್ಥಿಗಳು ಕಾಲೇಜಿನ ಮೂಲಕ ಮಹಿಳೆಯರ ಏಳಿಗೆ ಮತ್ತು ಅಭಿವೃದ್ಧಿಗಾಗಿ ಶ್ರಮಿಸುತ್ತಾ ಬಂದಿದ್ದಾರೆ. ಹಾಗಾಗಿ ದಕ್ಷಿಣಕನ್ನಡ ಜಿಲ್ಲೆಯಲ್ಲಿ ಮಹಿಳಾ ಉನ್ನತ ಶಿಕ್ಷಣವು ಸಂತ ಆಗ್ನೆಸ್ ಕಾಲೇಜಿನಿಂದಲೇ ಪ್ರಾರಂಭವಾಯಿತು ಎನ್ನಬಹುದು.

### ೩.೨ ಮಹಿಳೆ ಮತ್ತು ಉನ್ನತ ಶಿಕ್ಷಣ ನೀತಿಗಳು

ನಮ್ಮ ಸರಕಾರವು ಮಹಿಳೆಯರ ಮತ್ತು ಹಿಂದುಳಿದ ವರ್ಗದ ಜನರ ಶಿಕ್ಷಣಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಡುತ್ತದೆ. ದೇಶವು ಹಾಕಿಕೊಂಡ ಮೊದಲ ಪಂಚವಾರ್ಷಿಕ ಯೋಜನೆಗಳಲ್ಲಿ ಮಹಿಳೆಯರ ಸಮಸ್ಯೆಗಳ ಅಧ್ಯಯನಕ್ಕೆ ಮಹತ್ವವನ್ನು ಕೊಡಲಾಗಿತ್ತು. ೧೯೬೮ರ ಶಿಕ್ಷಣ ನೀತಿಯು ಇಡೀ ರಾಷ್ಟ್ರದಲ್ಲಿ ಒಂದೇ ರೀತಿಯ ಶಿಕ್ಷಣಕ್ಕೆ ಪ್ರಾಮುಖ್ಯತೆಯನ್ನು ಕೊಟ್ಟಿದೆ. ೧೯೫೯ರ ಶಿಕ್ಷಣ ಸಮಿತಿಯ ಸಮೀಕ್ಷೆಯು ಮಹಿಳಾ ಶಿಕ್ಷಣಕ್ಕೆ ಹೆಚ್ಚಿನ ಒತ್ತುಕೊಟ್ಟಿದೆ. ಆದರೂ ಶಿಕ್ಷಣ ಕ್ಷೇತ್ರದಲ್ಲಿರುವ ಲಿಂಗ ತಾರತಮ್ಯ

ಮುಂದುವರೆಯುತ್ತಾ ಬಂದಿದೆ. ಆರನೇ ಪಂಚವಾರ್ಷಿಕ ಯೋಜನೆಯು ಮಹಿಳೆಯರು ಉನ್ನತ ಶಿಕ್ಷಣವನ್ನು ಹೊಂದುವುದು ಅಭಿವೃದ್ಧಿಗೆ ಅಗತ್ಯ ಎನ್ನುವುದನ್ನು ಅರಿತುಕೊಂಡು ಇದಕೆ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಟ್ಟಿದೆ.

೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯು ಮಹಿಳಾ ಶಿಕ್ಷಣ ಮತ್ತು ಸಬಲೀಕರಣಕ್ಕೆ ಆದ್ಯತೆಯನ್ನು ಕೊಟ್ಟಿದೆ. ೧೯೮೮–೨೦೦೦ದ ನೀತಿಗಳು ಮತ್ತು ಪಂಚವಾರ್ಷಿಕ ಯೋಜನೆಗಳು ಮಹಿಳಾ ಶಿಕ್ಷಣಕ್ಕೆ ಹೆಚ್ಚಿನ ಪ್ರಾಶಸ್ತ್ಯ ಕೊಟ್ಟಿದೆ. ೧೯೯೨ರಲ್ಲಿ ಹಾಕಿಕೊಂಡ ೧೯೮೬ರ ಶಿಕ್ಷಣ ನೀತಿಯ ಮುಂದುವರೆದ ಭಾಗವು ಲಿಂಗ ಸಮಾನತೆಗಾಗಿ ಮಹಿಳಾ ಶಿಕ್ಷಣಕ್ಕೆ ಹೆಚ್ಚಿನ ಅವಕಾಶ ಮಾಡಿಕೊಟ್ಟಿದೆ. ಈ ನೀತಿಯು ಶಿಕ್ಷಣ ತಜ್ಞರು ಮಹಿಳೆಯರ ಸಬಲೀಕರಣಕ್ಕೆ ಬೇಕಾದ ತರಬೇತಿಯನ್ನು ಅಧ್ಯಾಪಕರಿಗೆ, ಸರಕಾರಿ ಅಧಿಕಾರಿಗಳಿಗೆ, ಆಡಳಿತಗಾರರಿಗೆ ಒದಗಿಸಬೇಕು ಎನ್ನುವ ವಾದಕ್ಕೆ ಹೆಚ್ಚಿನ ಪುಷ್ಟಿಕೊಟ್ಟಿದೆ.

ಭಾರತದಲ್ಲಿ ಶಿಕ್ಷಣವನ್ನು ಪಡೆಯುವ ಮಹಿಳೆಯರ ಸಂಖ್ಯೆ ತುಂಬಾ ಕಡಿಮೆಯಾಗಿದೆ. ಅದರಲ್ಲೂ ಉಚ್ಛ ಶಿಕ್ಷಣವನ್ನು ಪಡೆಯುವವರ ಸಂಖ್ಯೆ ಇನ್ನೂ ಕಡಿಮೆ. ಇದಕ್ಕೆ ಮುಖ್ಯ ಕಾರಣ ಮಹಿಳೆಯರು ಉಚ್ಛ ಶಿಕ್ಷಣವನ್ನು ಪಡೆಯುವುದಕ್ಕೆ ಹೆಚ್ಚಿನ ಕುಟುಂಬಗಳಲ್ಲಿ ಅವಕಾಶವಿರುವುದಿಲ್ಲ. ಉದಾಹರಣೆಗೆ ಇತ್ತೀಚಿನ ವರ್ಷಗಳಲ್ಲಿ ಮಧ್ಯಮ ಹಾಗೂ ಶ್ರೀಮಂತ ಕುಟುಂಬದ ಮಹಿಳೆಯರು ತಾಂತ್ರಿಕ ಶಿಕ್ಷಣವನ್ನು ಪಡೆಯುತ್ತಿದ್ದಾರೆ. ಬಡಕುಟುಂಬದ ಮಹಿಳೆಯರಿಗೆ ಅದು ಇನ್ನೂ ಮರೀಚಿಕೆಯಾಗಿದೆ. ಮಹಿಳೆಯರು ಕಡಿಮೆ ಸಂಖ್ಯೆಯಲ್ಲಿ ಉನ್ನತ ಶಿಕ್ಷಣವನ್ನು ಪಡೆಯುವುದಕ್ಕೆ ಹಲವಾರು, ಕಾರಣಗಳಿವೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ಧಾರ್ಮಿಕ ಕಾರಣಗಳು.

### ೩.೨.೧ ಆರ್ಥಿಕ ಕಾರಣಗಳು

ಸ್ವಾತಂತ್ರ್ಯಾನಂತರ ನಮ್ಮ ದೇಶದ ಜನರ ದೃಷ್ಟಿಕೋನದಲ್ಲಿ ಹೆಚ್ಚಿನ ಬದಲಾವಣೆ ಉಂಟಾಗಿವೆ. ಆದರೆ ಹೆಚ್ಚಿನ ಕುಟುಂಬಗಳು ಬಡಕುಟುಂಬಗಳಾಗಿರುವುದರಿಂದ ಅವರಿಗೆ ಹೆಚ್ಚು ವೆಚ್ಚದಾಯಕವಾದ ಉನ್ನತ ಶಿಕ್ಷಣವನ್ನು ಕೊಡಲು ಸಾಧ್ಯವಾಗಿರುವುದಿಲ್ಲ. ಇಂತಹ ಕುಟುಂಬಗಳು ಸರಕಾರವು ಕೊಡುವ ಉಚಿತ ಶಿಕ್ಷಣದವರೆಗೆ ಮಾತ್ರ ಮಕ್ಕಳಿಗೆ ಶಿಕ್ಷಣವನ್ನು ಕೊಟ್ಟು ಅಷ್ಟಕ್ಕೇ ತೃಪ್ತರಾಗಬೇಕಾಗುತ್ತದೆ. ಗ್ರಾಮೀಣ ಪ್ರದೇಶಗಳಲ್ಲಿರುವ ಬಹು ಸಂಖ್ಯಾತ ಜನರು ಬಡವರಾಗಿದ್ದು ಅವರು ಗ್ರಾಮೀಣ ಮಟ್ಟದಲ್ಲಿ ದೊರಕುವ ಕನಿಷ್ಠ ಶಿಕ್ಷಣಕ್ಕೆ ತೃಪ್ತರಾಗಬೇಕಾಗುತ್ತದೆ. ಆದುದರಿಂದ ನಮ್ಮ ದೇಶದ ಹೆಚ್ಚಿನ ಮಹಿಳೆಯರು ಪ್ರಾಥಮಿಕ ಅಥವಾ ಪ್ರೌಢಶಿಕ್ಷಣ ಹಂತದವರೆಗೆ ಮಾತ್ರ ಶಿಕ್ಷಣವನ್ನು ಪಡೆಯಲು ಸಾಧ್ಯವಾಗುತ್ತದೆ.

### ೩.೨.೨ ಸಾಮಾಜಿಕ ಕಾರಣಗಳು

ಭಾರತದ ಸಾಮಾಜಿಕ ಅಂಶಗಳೂ ಮಹಿಳಾ ಶಿಕ್ಷಣ ವಿರೋಧಿಯಾಗಿವೆ ಎಂದರೆ ತಪ್ಪಾಗಲಾರದು. ಭಾರತೀಯರಲ್ಲಿ ಸಾಮಾನ್ಯವಾಗಿ 'ಹೆಣ್ಣಿನ ಸ್ಥಾನ ಅಡುಗೆ ಮನೆ' ಎನ್ನುವ ಭಾವನೆಯಿದೆ. ಆದುದರಿಂದ ಅವಳಿಗೆ ಹೆಚ್ಚಿನ ಶಿಕ್ಷಣದ ಅಗತ್ಯವಿಲ್ಲ ಎಂಬ ಭಾವನೆಯನ್ನು ಬಹುಸಂಖ್ಯಾತ ಹೆತ್ತವರು ಹೊಂದಿರುತ್ತಾರೆ.

ನಮ್ಮ ದೇಶದಲ್ಲಿ ಹೆಣ್ಣುಮಕ್ಕಳ ವಿವಾಹದ ಸಮಯದಲ್ಲಿ ಕೊಡಬೇಕಾದ ವರದಕ್ಷಿಣೆ, ವಿವಾಹದ ವೆಚ್ಚ ಇತ್ಯಾದಿಗಳಿಂದಾಗಿ ಹೆತ್ತವರು ಅವಳಿಗೆ ಹೆಚ್ಚು ವೆಚ್ಚದಾಯಕವಾದ ಉನ್ನತ ಶಿಕ್ಷಣವನ್ನು ಕೊಡಿಸುವುದಕ್ಕೆ ಸಿದ್ಧರಿರುವುದಿಲ್ಲ. ಭಾರತದಲ್ಲಿ ಹೆಚ್ಚಿನ ಕುಟುಂಬಗಳು ಪುರುಷ ಪ್ರಧಾನ ಕುಟುಂಬಗಳಾಗಿದ್ದು ಅಲ್ಲಿ ಗಂಡು ಮಕ್ಕಳ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆಯಿರುತ್ತದೆಯೇ ಹೊರತು ಹೆಣ್ಣುಮಕ್ಕಳ ಶಿಕ್ಷಣಕ್ಕಲ್ಲ. ಏಕೆಂದರೆ ಹೆಣ್ಣು ಹುಟ್ಟಿದಾಗಲೇ ಪರರ ಮನೆ ಸೇರುವವಳು ಎನ್ನುವ ಭಾವನೆ ನಮ್ಮ ಸಮಾಜದ ಜನರಲ್ಲಿ ಬೇರೂರಿದೆ.

ನಮ್ಮ ಕುಟುಂಬಗಳು ದೊಡ್ಡ ಕುಟುಂಬಗಳಾಗಿದ್ದು ಇಂತಹ ಕುಟುಂಬಗಳ ಸದಸ್ಯರನ್ನು ನೋಡಿಕೊಳ್ಳುವ ಜವಾಬ್ದಾರಿಯು ಮಹಿಳೆಯದಾಗಿರುತ್ತದೆ. ಅಂದರೆ ತಂದೆ-ತಾಯಿ ದುಡಿಯಲು ಹೊರಗೆ ಹೋದಾಗ ಆ ಕುಟುಂಬದ ಸದಸ್ಯರನ್ನು ನೋಡಿಕೊಳ್ಳುವ ಜವಾಬ್ದಾರಿಯು ಮಗಳಂದಿರ ಮೇಲೆ ಬರುತ್ತದೆ. ಇದರಿಂದಾಗಿ ಮಹಿಳೆಯರ ಶಿಕ್ಷಣವು ಕುಂಠಿತಗೊಳ್ಳುತ್ತದೆ.

ಭಾರತದಲ್ಲಿ ಬಾಲ್ಯ ವಿವಾಹವು ಸಾಮಾನ್ಯವಾಗಿದೆ. ಸಣ್ಣ ವಯಸ್ಸಿನಲ್ಲೇ ಹುಡುಗಿಯರಿಗೆ ವಿವಾಹ ಮಾಡುವುದರಿಂದ ಅವರು ಶಿಕ್ಷಣ ವಂಚಿತರಾಗುತ್ತಾರೆ. ಇನ್ನು ಹುಡುಗಿಯರು ಮೈ ನೆರೆದ ನಂತರ ಶಾಲೆಗೆ ಹೋಗುವುದು ಸಮಂಜಸವಲ್ಲ ಎನ್ನುವ ಭಾವನೆಯು ಭಾರತದಲ್ಲಿ ಸಾಮಾನ್ಯವಾಗಿದೆ. ಹುಡುಗಿಯರು ಪ್ರೌಢಶಿಕ್ಷಣ ಹಂತಕ್ಕೆ ಬಂದಾಗ ಮೈನೆರೆಯುವುದರಿಂದ ಹಿರಿಯರು ನಂತರ ಅವರನ್ನು ಶಾಲಾ ಕಾಲೇಜುಗಳಿಗೆ ಕಳುಹಿಸಲು ಇಚ್ಛಿಸುವುದಿಲ್ಲ. ಅಲ್ಲದೆ ಹಳ್ಳಿಗೆ ಅಥವಾ ಎರಡು, ಮೂರು ಹಳ್ಳಿಗೆ ಒಂದು ಪ್ರೌಢಶಾಲೆ ಇರುವುದರಿಂದ ದೂರ ಪ್ರದೇಶಗಳಿಗೆ ಶಿಕ್ಷಣಕ್ಕೋಸ್ಕರ ಹುಡುಗಿಯರು ಓಡಾಡಲು ಸಾಧ್ಯವಾಗುವುದಿಲ್ಲ.

ನಮ್ಮ ಜನರು ಅನುಸರಿಸುತ್ತಿರುವ ಧಾರ್ಮಿಕ ಮತ್ತು ಸಾಂಸ್ಕೃತಿಕ ಅಂಶಗಳು ಮಹಿಳೆಯರು ಉನ್ನತ ಶಿಕ್ಷಣವನ್ನು ಪಡೆಯುವುದಕ್ಕೆ ಪೂರಕವಾಗಿರುವುದಿಲ್ಲ. ಕೆಲವು ಧರ್ಮದ ಜನರು ತಮ್ಮ ಹೆಣ್ಣು ಮಕ್ಕಳನ್ನು ಸಹಶಿಕ್ಷಣವನ್ನು ನೀಡುವಂತಹ ಶಾಲಾಕಾಲೇಜುಗಳಿಗೆ ಕಳುಹಿಸಲು ಇಷ್ಟಪಡುವುದಿಲ್ಲ. ಆದರೆ ನಮ್ಮ ದೇಶದಲ್ಲಿ ಕೇವಲ ಮಹಿಳೆಯರಿಗಾಗಿ ಇರುವ ಸಂಸ್ಥೆಗಳು ಬೆರಳೆಣಿಕೆಯಷ್ಟು ಮಾತ್ರ ಹಾಗೂ ಇಂತಹ ಸಂಸ್ಥೆಗಳು ನಗರ ಪ್ರದೇಶಗಳಲ್ಲಿ ಕೇಂದ್ರೀಕರಣಗೊಂಡಿವೆ. ಕೆಲವೊಮ್ಮೆ ವಿದ್ಯಾ ಸಂಸ್ಥೆಗಳಲ್ಲಿ ಉದ್ಯೋಗದಲ್ಲಿರುವ ಪುರುಷರ ಅಥವಾ ಹೊರಗಿನ ಪುರುಷರ ಕಾಮುಕ ದೃಷ್ಟಿಯು ವಿದ್ಯಾರ್ಥಿನಿಯರ ಮೇಲೆ

ಬಿದ್ದಾಗ ಉನ್ನತ ಶಿಕ್ಷಣಕ್ಕೆ ಸೇರುವ ವಿದ್ಯಾರ್ಥಿನಿಲಯದ ಸಂಖ್ಯೆ ಕಡಿಮೆಯಾಗುತ್ತ ಬರುತ್ತದೆ (ಜಯರಾಮ್, ೧೯೮೭).

ಮಹಿಳೆಯರ ಜನಸಂಖ್ಯೆಯು ಜಗತ್ತಿನ ಒಟ್ಟು ಜನಸಂಖ್ಯೆಯ ಅರ್ಧದಟ್ಟಿದೆ. ಆದರೆ ಜಗತ್ತಿನಾದ್ಯಂತ ಮಹಿಳೆಯರ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸ್ಥಾನಮಾನ ಪುರುಷರಿಗಿಂತ ಕೆಳಮಟ್ಟದಲ್ಲಿದೆ. ಇದು ದೇಶದಿಂದ ದೇಶಕ್ಕೆ, ಸಮಾಜದಿಂದ ಸಮಾಜಕ್ಕೆ ಭಿನ್ನವಾಗಿದ್ದರೂ ಒಟ್ಟಾರೆಯಾಗಿ ಮಹಿಳೆಯರ ಸ್ಥಿತಿಗತಿ ಪುರುಷರಿಗಿಂತ ಕೆಳಮಟ್ಟದಲ್ಲಿದೆ. ಮುಂದುವರಿದ ಕೈಗಾರಿಕಾ ರಾಷ್ಟ್ರಗಳಲ್ಲಿ ಮತ್ತು ಹಿಂದುಳಿದ ಬಡರಾಷ್ಟ್ರಗಳಲ್ಲಿ ಮಹಿಳೆಯರು ಅನೇಕ ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ತಾರತಮ್ಯ ಹಾಗೂ ಅನ್ಯಾಯಗಳ ಬಲಿಪಶುಗಳಾಗಿದ್ದಾರೆ. ಶಿಕ್ಷಣ, ಉದ್ಯೋಗ, ವಿವಾಹ, ಕುಟುಂಬ, ವೃತ್ತಿ ಮತ್ತು ರಾಜಕೀಯ ಜೀವನದಲ್ಲಿ ವ್ಯಕ್ತಿಗತ ಬೆಳವಣಿಗೆ ಮತ್ತು ಸಾಮಾಜಿಕ ಅಭಿವೃದ್ಧಿಯ ದಿಶೆಯಲ್ಲಿ ಪುರುಷರು ಅನುಭವಿಸುವ ಅವಕಾಶಗಳನ್ನು ಮಹಿಳೆಯರಿಗೆ ನಿರಾಕರಿಸಲಾಗುತ್ತದೆ.

ಭಾರತದಲ್ಲಿ ಸಾಂಪ್ರದಾಯಿಕವಾಗಿ ಮಹಿಳೆಯರನ್ನು ಪೂಜನೀಯ ಭಾವನೆಯಿಂದ ಗೌರವಿಸುವ ಪದ್ಧತಿಯಿದೆ. ಆದರೆ ಇದಕ್ಕೂ ವಾಸ್ತವಿಕ ಪರಿಸ್ಥಿತಿಗೂ ಅಜಗಜಾಂತರ ವ್ಯತ್ಯಾಸವಿದೆ. ಭಾರತದಲ್ಲಿ ಮಹಿಳೆಯರ ಶಿಕ್ಷಣವನ್ನು ಹಿಂದಿನಿಂದಲೂ ಕಡೆಗಣಿಸುತ್ತಾ ಬರಲಾಗಿದೆ. ಹಲವಾರು ಸಂದರ್ಭಗಳಲ್ಲಿ ಬೇರೆ ಬೇರೆ ಆಯೋಗಗಳು ಮತ್ತು ಶ್ರೇಷ್ಠ ನಾಯಕರು ಮಹಿಳಾ ಶಿಕ್ಷಣದ ಅಗತ್ಯವನ್ನು ಒತ್ತಿಹೇಳಿದ್ದಾರೆ. ಮಹಾತ್ಮಾಗಾಂಧಿಯವರ ಪ್ರಕಾರ, ಬಾಲಕನಿಗೆ ಶಿಕ್ಷಣ ನೀಡಿದರೆ, ಒಬ್ಬ ವ್ಯಕ್ತಿ ವಿದ್ಯಾವಂತನಾಗುತ್ತಾನೆ. ಆದರೆ ಬಾಲಕಿಗೆ ವಿದ್ಯೆ ನೀಡಿದರೆ ಇಡೀ ಕುಟುಂಬಕ್ಕೆ ಶಿಕ್ಷಣ ನೀಡಿದಂತೆ. ಮಾನವ ಸಂಪನ್ಮೂಲದ ಸಂಪೂರ್ಣ ಬಳಕೆಗಾಗಿ, ಮನೆಯ ವಾತಾವರಣವನ್ನು ಉತ್ತಮ ಪಡಿಸಲು, ಮಕ್ಕಳ ಗುಣನಡತೆಯನ್ನು ತಿದ್ದಿ, ಸರಿಯಾದ ದಿಕ್ಕಿನಲ್ಲಿ ಮುನ್ನಡೆಸಲು ಮಹಿಳೆಯರ ಶಿಕ್ಷಣ, ಪುರುಷರಿಂದ ವಿದ್ಯಾವಂತ ಸಮಾಜದ ನಿರ್ಮಾಣ ಅಸಾಧ್ಯವೆಂದು ವಿಶ್ವವಿದ್ಯಾನಿಲಯ ಶಿಕ್ಷಣ ಆಯೋಗ (೧೯೪೮–೪೯) ಹೇಳಿದೆ. ಅಲ್ಲದೇ, ಒಂದು ವೇಳೆ ಶಿಕ್ಷಣವನ್ನು ಪುರುಷರಿಗೆ ಅಥವಾ ಮಹಿಳೆಯರಿಗೆ ಸೀಮಿತಗೊಳಿಸುವುದಾದಲ್ಲಿ ಅಂತಹ ಅವಕಾಶ ಮಹಿಳೆಯರಿಗೆ ದೊರೆಯಬೇಕೆಂದು ಅದು ಹೇಳಿದೆ. ಯಾಕೆಂದರೆ, ಇಲ್ಲಿ ಮುಂದಿನ ಜನಾಂಗಕ್ಕೆ ಜ್ಞಾನವು ವರ್ಗಾವಣೆಯಾಗುವ ಭರವಸೆ ಇದ್ದೇ ಇದೆ.

ಭಾರತದಲ್ಲಿ ಇತರೆಲ್ಲಾ ಹಿಂದುಳಿದ ರಾಷ್ಟ್ರಗಳಂತೆ, ಉನ್ನತ ಶಿಕ್ಷಣ ಪಡೆಯುವ ಮಹಿಳೆಯರ ಸಂಖ್ಯೆ ತೀರಾ ಅತ್ಯಲ್ಪ. ಹೆಚ್ಚಿನ ಮಹಿಳೆಯರು ಶಿಕ್ಷಕಿ, ಶುಶ್ರೂಷಕಿ, ಸಮಾಜ ಸೇವೆ, ಟೈಪಿಂಗ್, ಸ್ಟೆನೋಗ್ರಫಿ ಇತ್ಯಾದಿ ವೃತ್ತಿಗಳಲ್ಲಿ ಕಾಣಿಸಿಕೊಳ್ಳುತ್ತಿದ್ದಾರೆ. ೧೯೪೬–೪೭ರ ಅವಧಿಯಲ್ಲಿ ಪ್ರತಿ ೧೦೦ ಬಾಲಕರಿಗೆ, ಮಹಿಳೆಯರ

ಪ್ರಮಾಣವು ಪ್ರಾಥಮಿಕ ಶಾಲೆಯಲ್ಲಿ ೩೬, ಪ್ರೌಢಶಾಲಾ ಹಂತದಲ್ಲಿ ೧೪ ಮತ್ತು ವಿಶ್ವವಿದ್ಯಾನಿಲಯದ ಹಂತದಲ್ಲಿ ೭ರಷ್ಟಿತ್ತು. ಉದ್ಯೋಗಕ್ಕೆ ಸಂಬಂಧಿಸಿದಂತೆ ೩೪.೫ ಶೇಕಡಾದಷ್ಟು ಮಹಿಳೆಯರು ಕೃಷಿ ಕಾರ್ಮಿಕರಾಗಿದ್ದರೆ, ೨.೮ ಮಹಿಳೆಯರು ಜಾನುವಾರು ಸಾಕಾಣಿಕೆ, ಅರಣ್ಯೀಕರಣ, ಮೀನುಗಾರಿಕೆ, ತೋಟಗಾರಿಕೆ ಇತ್ಯಾದಿಗಳಲ್ಲಿ ತೊಡಗಿಸಿಕೊಂಡಿದ್ದಾರೆ.

ಈ ರೀತಿಯ ಅಸಮಾನತೆಯನ್ನು ಹೋಗಲಾಡಿಸುವುದಕ್ಕೋಸ್ಕರ, ಮಹಿಳೆಯರಿಗೆ ಉನ್ನತ ಶಿಕ್ಷಣ ನೀಡುವುದು ಅತಿ ಅಗತ್ಯವಾಗಿದೆ. ೧೯೭೭ರ ಮಹಿಳಾ ಉನ್ನತ ಶಿಕ್ಷಣ ಆಯೋಗವು ಮಹಿಳೆಯರಿಗೆ ಮತ್ತು ಪುರುಷರಿಗೆ ತಮ್ಮ ವ್ಯಕ್ತಿತ್ವವನ್ನು ರೂಪಿಸಲು, ಸಂಪಾದನೆಯ ಸಾಮರ್ಥ್ಯವನ್ನು ಗಳಿಸಲು ಮತ್ತು ವ್ಯಕ್ತಿತ್ವ ಬೆಳವಣಿಗೆಗೆ ಕಾಲೇಜು ಶಿಕ್ಷಣ ಅಗತ್ಯವೆಂದು ಪ್ರತಿಪಾದಿಸಿದೆ. ಉನ್ನತ ಶಿಕ್ಷಣ ಪಡೆಯುವುದರಿಂದಾಗಿ, ಅವಕಾಶಗಳಿಗೆ ಸಂಬಂಧಿಸಿದಂತೆ ಲಿಂಗ ತಾರತಮ್ಯವನ್ನೂ ಹೋಗಲಾಡಿಸಬಹುದು. ಉತ್ತಮ ಶಿಕ್ಷಣದಿಂದಾಗಿ ಕುಟುಂಬದ ಆದಾಯ ಹೆಚ್ಚುವುದು ಮಾತ್ರವಲ್ಲದೆ, ಆರೋಗ್ಯ ಮತ್ತು ಇತರ ಸಾಮಾಜಿಕ ಅಭಿವೃದ್ಧಿ ಸೂಚಕಗಳಲ್ಲಿ ಸುಧಾರಣೆ ಕಾಣಬಹುದಾಗಿದೆ. ಹೆಚ್ಚಿನ ವಿದ್ಯಾಭ್ಯಾಸದಿಂದಾಗಿ ಮಹಿಳೆಯರು ಮಾರುಕಟ್ಟೆ ಆಧಾರಿತ ಚಟುವಟಿಕೆಗಳನ್ನು ಹೆಚ್ಚು ವ್ಯಸ್ತರಾಗುತ್ತಾರೆ.

ಉನ್ನತ ಶಿಕ್ಷಣದಿಂದ ಮಹಿಳೆಯರಿಗೆ ಆಗುವ ಪ್ರಯೋಜನಗಳೆಂದರೆ, ಮಹಿಳೆಯರು ಆರ್ಥಿಕವಾಗಿ ಸಬಲರಾಗಬಹುದು, ಇನ್ನೂ ಹೆಚ್ಚಿನ ವಿದ್ಯಾಭ್ಯಾಸ ಪಡೆಯಬಹುದು, ಉದ್ಯೋಗ ಭದ್ರತೆ, ಉದ್ಯೋಗಾವಕಾಶಗಳನ್ನು ಬಳಸಿಕೊಳ್ಳುವ ಸಾಮರ್ಥ್ಯ, ಉನ್ನತ ಮಟ್ಟದ ಜೀವನ ಗುಣಮಟ್ಟ ಇತ್ಯಾದಿಗಳನ್ನು ಹೊಂದಬಹುದು.

### ೩.೨.೩ ಉನ್ನತ ಶಿಕ್ಷಣದಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆಗೆ ಇರುವ ಅಡೆತಡೆಗಳು

ಉನ್ನತ ಶಿಕ್ಷಣದಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆಗೆ ಸಂಬಂಧಿಸಿದಂತೆ, ಹಲವಾರು ಅಡೆತಡೆಗಳಿದ್ದು, ಅವುಗಳು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುತ್ತದೆ. ಸಾಮಾಜಿಕವಾಗಿ, ನಮ್ಮ ಸಮಾಜವು ಮಹಿಳಾ ವಿದ್ಯಾಭ್ಯಾಸದ ಅಗತ್ಯತೆಯನ್ನು ಇನ್ನೂ ಮನಗಂಡಿಲ್ಲ. ಪುರುಷಪ್ರಧಾನ ಸಮಾಜವಿರುವುದರಿಂದ ಮತ್ತು ಮಹಿಳೆಯರ ಪಾತ್ರ ಮನೆ ನಿಭಾಯಿಸುವುದಕ್ಕೆ ಮಾತ್ರ ಸೀಮಿತ ಎಂಬ ಭಾವನೆಯಿರುವುದರಿಂದ, ಮಹಿಳೆಯರ ವಿದ್ಯಾಭ್ಯಾಸವನ್ನು ನಿರ್ಲಕ್ಷಿಸಲಾಗುತ್ತಿದೆ.

ಹೆಣ್ಣು ಮಗು ಮದುವೆಯಾಗಿ ಬೇರೊಂದು ಮನೆಯನ್ನು ಸೇರುವುದರಿಂದ, ಆಕೆಯ ಶಿಕ್ಷಣದಿಂದ ತಮಗೇನೂ ಪ್ರಯೋಜನವಿಲ್ಲ ಎಂಬ ಭಾವನೆ ಹೆಚ್ಚಿನ ಪಾಲಕರಲ್ಲಿದೆ. ಅಲ್ಲದೆ ವರದಕ್ಷಿಣೆಗೆ ಹಣ ಹೊಂದಿಸಬೇಕಾಗಿರುವಾಗ, ಆಕೆಯ ಶಿಕ್ಷಣದ ವೆಚ್ಚವನ್ನು ಭರಿಸುವುದು ಪಾಲಕರಿಗೆ ಕಷ್ಟದಾಯಕವಾಗಿ ಪರಿಣಮಿಸುತ್ತದೆ. ಒಂದು ವೇಳೆ ಹೆಣ್ಣು ಮಗುವಿಗೆ ಶಿಕ್ಷಣ ನೀಡಿದರೂ, ಅದು ಅತ್ಯಲ್ಪ ವೆಚ್ಚದ್ದಾಗಿರುತ್ತದೆ. ಮನೆಯ ಹತ್ತಿರದಲ್ಲೇ ಶಿಕ್ಷಣ ಸಂಸ್ಥೆ ಇಲ್ಲದಿದ್ದರೆ, ಹೆಣ್ಣುಮಗುವಿನ ಶಿಕ್ಷಣವನ್ನು ಅರ್ಧಕ್ಕೆ ನಿಲ್ಲಿಸಲಾಗುತ್ತದೆ. ಇದರಿಂದಾಗಿ ಗುಣಮಟ್ಟದ ಶಿಕ್ಷಣದಿಂದ ಆಕೆ ವಂಚಿತಳಾಗುತ್ತದೆ. ಸ್ಥಳ ದೂರದ ಸಮಸ್ಯೆಯು ಮಹಿಳೆಗೆ ಉನ್ನತ ಶಿಕ್ಷಣ ಪಡೆಯುವಲ್ಲಿ ಪ್ರಮುಖ ಅಡೆತಡೆಯಾಗಿದೆ.

ಸ್ವಾತಂತ್ರ್ಯಾನಂತರ ಭಾರತದ ಸಂವಿಧಾನವು ಮಹಿಳೆಯರ ಶೈಕ್ಷಣಿಕ ಮತ್ತು ಇತರ ಸಾಮಾಜಿಕ, ಆರ್ಥಿಕ ಹಿತಾಸಕ್ತಿಗಳನ್ನು ರಕ್ಷಿಸುವ ಪ್ರಯತ್ನವನ್ನು ಮಾಡಿದೆ. ಉನ್ನತ ಶಿಕ್ಷಣ ರಂಗದಲ್ಲಿ ಭಾರತವು ಗಣನೀಯ ಸಾಧನೆಯನ್ನು ಮಾಡಿದೆ. ಯುಜಿಸಿಯ ೨೦೦೩-೦೪ರ ವಾರ್ಷಿಕ ವರದಿಯ ಪ್ರಕಾರ, ದೇಶದಲ್ಲಿ ೩೨೦ ವಿಶ್ವವಿದ್ಯಾನಿಲಯಗಳಿದ್ದು ಅವುಗಳಲ್ಲಿ ವಿವಿಧ ವಿಷಯಗಳಲ್ಲಿ ಮತ್ತು ವಿವಿಧ ಹಂತಗಳಲ್ಲಿ ೯೯.೫೪ ಲಕ್ಷ ವಿದ್ಯಾರ್ಥಿಗಳು ಕಲಿಯುತ್ತಿದ್ದಾರೆ. ಅವರಲ್ಲಿ ೪೦.೦೩ ಲಕ್ಷ ಮಹಿಳಾ ವಿದ್ಯಾರ್ಥಿಗಳಿದ್ದು, ಅವರ ಶೇಕಡಾವಾರು ಪ್ರಮಾಣ ೪೦.೨೨.

ವಿಷಾದನೀಯವಾದ ಅಂಶವೆಂದರೆ, ಉನ್ನತ ಶಿಕ್ಷಣದಿಂದಾಗಿ, ಆರ್ಥಿಕ ಬೆಳವಣಿಗೆ ಮತ್ತು ಇತರ ಸಾಮಾಜಿಕ-ಸಾಂಸ್ಕೃತಿಕ ಮಾನದಂಡಗಳ ಸುಧಾರಣೆಗೆ ಮಹಿಳೆ ನೀಡಬಹುದಾದ ಸಂಭಾವ್ಯ ಕೊಡುಗೆಯ ಹೊರತಾಗಿಯೂ, ಲಿಂಗ ತಾರತಮ್ಯ ಎದ್ದು ಕಾಣುತ್ತಿದೆ. ಆದ್ದರಿಂದ ಎಲ್ಲಾ ಹೆಣ್ಣು ಮಕ್ಕಳಿಗೆ ಶಿಕ್ಷಣ ಲಭ್ಯವಾಗುವಂತೆ ಮಾಡುವ ನಿಟ್ಟಿನಲ್ಲಿ ವಿಶ್ವವಿದ್ಯಾನಿಲಯದ ಹಂತದವರೆಗೆ ಬಾಲಕಿಯರಿಗೆ ಶುಲ್ಕ ವಿನಾಯಿತಿ ನೀಡಬೇಕು. ಬಾಲಕಿಯರಿಗೆ ಪ್ರತ್ಯೇಕ ಶಾಲಾಕಾಲೇಜುಗಳನ್ನು ಸ್ಥಾಪಿಸುವುದರಿಂದ ಪಾಲಕರು ತಮ್ಮ ಮಕ್ಕಳನ್ನು ಯಾವುದೇ ಅಂಜಿಕೆಯಿಲ್ಲದೆ ಶಾಲೆಗೆ ಕಳುಹಿಸಬಹುದು. ಮೇಲಾಗಿ ಹೆಣ್ಮಕ್ಕಳ ಶಿಕ್ಷಣ ಅಗತ್ಯದ ಬಗ್ಗೆ ಸಮಾಜದ ತಿಳುವಳಿಕೆಯನ್ನು ಮೂಡಿಸಬೇಕಾಗಿದೆ. ಆದ್ದರಿಂದ ಕೇಂದ್ರ ಮತ್ತು ರಾಜ್ಯ ಸರಕಾರಗಳು ಸರಕಾರೇತರ ಸಂಸ್ಥೆಗಳೊಂದಿಗೆ ಕೈಜೋಡಿಸಿ ದೇಶದ ಮೂಲೆ ಮೂಲೆಯಲ್ಲೂ ಮಹಿಳಾ ಶಿಕ್ಷಣವನ್ನು ಪಸರಿಸಲು ಪ್ರಯತ್ನಿಸಬೇಕು.

ಪಾಲಕರು ಶಿಕ್ಷಕರನ್ನು ಸ್ವಯಂ ಸೇವಾ ಸಂಸ್ಥೆಗಳು ಮತ್ತು ಸರಕಾರದ ಜಂಟಿ ಪ್ರಯತ್ನದಿಂದಾಗಿ ಹೆಣ್ಣು ಭವಿಷ್ಯದ ಆರೋಗ್ಯಪೂರ್ಣ ಪ್ರಜೆಗಳಾಗಿ ರೂಪುಗೊಳ್ಳಲು ಸಾಧ್ಯ. ಶಿಕ್ಷಣದಿಂದಾಗಿ ಅವರಲ್ಲಿ ಆತ್ಮವಿಶ್ವಾಸ

ಮೂಡುತ್ತದೆ. ಇದರಿಂದಾಗಿ ಹೆಣ್ಣು ಮಗುವೊಂದು ಉತ್ತಮ ಗೃಹಿಣಿಯಾಗಿ, ತಾಯಿಯಾಗಿ, ಮತ್ತು ರಾಷ್ಟ್ರದ ಉತ್ತಮ ಪ್ರಜೆಯಾಗಿ ಕಾರ್ಯನಿರ್ವಹಿಸಲು ಸಾಧ್ಯವಾಗುತ್ತದೆ (ಚೌಹಾನ್, ೧೯೯೦).

## ೩.೩ ಉನ್ನತ ಶಿಕ್ಷಣದ ವಾಣಿಜ್ಯೀಕರಣ

ಈಗ ಭಾರತದಲ್ಲಿ ಉನ್ನತ ಶಿಕ್ಷಣವು ವಾಸ್ತವವಾಗಿ ವಾಣಿಜ್ಯದ ಸರಕಾಗಿದೆ. ಆದರೆ ಉನ್ನತ ಶಿಕ್ಷಣ ವಾಣಿಜ್ಯೀಕರಣ ಹಲವಾರು ಕಾರಣಗಳಿಂದ ಆಗುತ್ತಿದೆ. ಈ ಕಾರಣಗಳಲ್ಲಿ ಕೆಲವು ಕೇಂದ್ರದಲ್ಲಿ ಬಂದ ಸರಕಾರಗಳು, ವಿಶೇಷವಾಗಿ ೧೯೮೦ರ ದಶಕದ ಮಧ್ಯಭಾಗದಿಂದ ಬಂದ ಎಲ್ಲ ಸರಕಾರಗಳು ತೆಗೆದುಕೊಂಡ ಸಾಮಾಜಿಕ ಮತ್ತು ಆರ್ಥಿಕ ನೀತಿ–ನಿರ್ಧಾರಗಳು, ಆಳುವ ವರ್ಗದ ಸೈದ್ಧಾಂತಿಕ ಕಟ್ಟುಪಾಡುಗಳು, ನ್ಯಾಯಾಂಗದ ಸ್ವಯಂಪ್ರೇರಿತ ಪಾತ್ರ, ಉದ್ದಿಮೆ ಗುಂಪುಗಳ ಪಟ್ಟಭದ್ರ ಹಿತಾಸಕ್ತಿಗಳು, ಪ್ರಭುತ್ವ ಕ್ರಮೇಣ ಜನರ ಆಶೋತ್ತರಗಳಿಗೆ, ಅಗತ್ಯಗಳಿಗೆ ಸ್ಪಂದಿಸದೆ ಹಿಂದೆಗೆಯಲಾರಂಭಿಸಿದ್ದರಿಂದ ಸರಕಾರಿ ಬೊಕ್ಕಸದಿಂದ ನಡೆಯುವ ಶಿಕ್ಷಣ ವ್ಯವಸ್ಥೆಯ ವಿಫಲತೆ ಮತ್ತು ಮೇಲ್ವರ್ಗದವರು, ನವ ಶ್ರೀಮಂತರು ಮತ್ತು ಸಿರಿವಂತ ವಿಭಾಗಗಳು ದೇಶೀ ಮತ್ತು ವಿದೇಶೀ ಖಾಸಗೀ ವಲಯದ ಸಂಸ್ಥೆಗಳನ್ನು ಹೆಚ್ಚೆಚ್ಚಾಗಿ ಆಯ್ದುಕೊಳ್ಳುತ್ತಿರುವುದು.

೧೯೯೦ರ ದಶಕದ ಆರಂಭದಲ್ಲಿ ಜಾಗತೀಕರಣದ ಯುಗ ಆರಂಭವಾಯಿತು. ಸಾರ್ವಜನಿಕ ವೆಚ್ಚದಲ್ಲಿ ಉನ್ನತ ಶಿಕ್ಷಣಕ್ಕೆ ಮಾಡಲಾಗುತ್ತಿದ್ದ ಖರ್ಚನ್ನು ಬೃಹತ್ ಪ್ರಮಾಣದಲ್ಲಿ ಕಡಿತಕೊಳಿಸಲಾಯಿತು. ಈ ದಶಕದ ಆರಂಭದಲ್ಲಿ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳಿಗೆ ವೇತನ ನೀಡುವುದು ಕೂಡ ಕಷ್ಟವಾಯಿತು. ಆವರ್ತ ವೆಚ್ಚದ ಶೇಕಡಾ ೨೫ ಭಾಗವನ್ನು ವಿದ್ಯಾರ್ಥಿಗಳಿಂದ ಪಡೆಯಬೇಕು ಹಾಗೂ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿರುವ ಸೌಲಭ್ಯಗಳನ್ನು ಬಾಡಿಗೆಗೆ ನೀಡುವ ಮೂಲಕ ಸಂಪನ್ಮೂಲಗಳನ್ನು ಸಂಗ್ರಹಿಸಬೇಕು ಎಂದು ಪುನ್ನೈಯ್ಯ ಸಮಿತಿಯು ಶಿಫಾರಸು ಮಾಡಿತು. ಇದು ಉನ್ನತ ಶಿಕ್ಷಣದ ವಾಣಿಜ್ಯೀಕರಣಕ್ಕೆ ನೇರವಾಗಿ ಕುಮ್ಮಕ್ಕು ನೀಡಿತು.

೧೯೯೭ರಲ್ಲಿ ಆರ್ಥಿಕ ಸಚಿವಾಲಯವು "ಭಾರತದಲ್ಲಿ ಸಹಾಯಧನಗಳು: ಒಂದು ಚರ್ಚಾಪ್ರಬಂಧ"ದಲ್ಲಿ ಮಾಧ್ಯಮಿಕ ಶಿಕ್ಷಣವೂ ಒಳಗೊಂಡಂತೆ ಉನ್ನತ ಶಿಕ್ಷಣವು "ನಾನ್–ಮೆರಿಟ್ ಗುಡ್" (ಅರ್ಹತೆಯಿಲ್ಲದ ಪ್ರಯೋಜನ) ಎಂದು ಪ್ರಸ್ತಾವಿಸಿದೆ. ಅಂದರೆ ಇವುಗಳಿಗೆ ಸರಕಾರ ಕೊಡುವ ಸಹಾಯಧನವನ್ನು ತೀವ್ರವಾಗಿ ಕಡಿತಗೊಳಿಸಬೇಕು (ಹೆಗಡೆ, ೨೦೦೮).

## ೩.೪ ಉನ್ನತ ಶಿಕ್ಷಣ ಕ್ಷೇತ್ರದ ಏಳುಬೀಳುಗಳು

ವಿಶ್ವವಿದ್ಯಾಲಯ ಶಿಕ್ಷಣವ್ಯವಸ್ಥೆಯ ಕಲ್ಪನೆಯನ್ನು ನಾವು ಪಾಶ್ಚಾತ್ಯದಿಂದ ಎರವಲು ಪಡೆದಿದ್ದೇನೆ ಎಂಬ ಒಂದು ಮಾತು ನಮ್ಮಲ್ಲಿ ಪ್ರಚಲಿತದಲ್ಲಿದೆ. ಇದೊಂದು ತಪ್ಪು ಕಲ್ಪನೆ. ನಮ್ಮಲ್ಲೂ ಹಿಂದೆ ವಿಕ್ರಮಶಿಲಾ, ನಲಂದಾ, ತಕ್ಷಶಿಲಾ ಮುಂತಾದ ವಿಶ್ವವಿದ್ಯಾಲಯಗಳಿದ್ದವು. ಪಾಂಡಿತ್ಯದ ಬಗೆಗಿನ ಮೋಹ, ಜ್ಞಾನದಾಹ, ಜ್ಞಾನಪಿಪಾಸುಗಳು ಹಾಗೂ ಪಾತ್ರತ್ವವುಳ್ಳ ಕೆಲವರಿಗೆ ಮಾತ್ರ ವಿದ್ಯಾದಾನ ಮುಂತಾದ ಗುರಿಗಳು ಆ ಕಾಲದ ವಿಶ್ವವಿದ್ಯಾಲಯ ವ್ಯವಸ್ಥೆಯಲ್ಲಿದ್ದವು. ಆದರೆ ಆಧುನಿಕ ವಿಶ್ವವಿದ್ಯಾಲಯ ಶಿಕ್ಷಣ ವ್ಯವಸ್ಥೆ ನಮಗೆ ವಸಾಹತುಶಾಹಿಯ ಬಳುವಳಿಯಾಗಿ ಬಂದಿದೆ.

ನಮ್ಮ ದೇಶದ ಉನ್ನತ ಶಿಕ್ಷಣ ಬ್ರಿಟಿಷ್ ವಸಾಹತುಶಾಹಿಯ ಬಳುವಳಿ, ೧೪೭ ವರ್ಷಗಳಷ್ಟು ಹಳೆಯದು. ಅಂಕಿಅಂಶಗಳ ದೃಷ್ಟಿಯಿಂದ ಜಗತ್ತಿನಲ್ಲೇ ಅತ್ಯಂತ ದೊಡ್ಡ ಶಿಕ್ಷಣ ವ್ಯವಸ್ಥೆ. ದೇಶಕ್ಕೆ ಸ್ವಾತಂತ್ರ್ಯ ಬಂದ ವರ್ಷದಲ್ಲಿ ಇಪ್ಪತ್ತು ವಿಶ್ವವಿದ್ಯಾಲಯಗಳು ಹಾಗೂ ೫೦೦ ಕಾಲೇಜುಗಳು ಇದ್ದವು. ಈಗ ಸುಮಾರು ೩೦೦ ವಿಶ್ವವಿದ್ಯಾಲಯಗಳಿವೆ, ೧೪,೦೦೦ ಕಾಲೇಜುಗಳಿವೆ. ಸುಮಾರು ೧೦೨ ಲಕ್ಷ ವಿದ್ಯಾರ್ಥಿಗಳು ದಾಖಲಾಗಿದ್ದಾರೆ, ಮೂರುವರೆ ಲಕ್ಷ ಶಿಕ್ಷಕರು ಸೇವೆ ಸಲ್ಲಿಸುತ್ತಿದ್ದಾರೆ. ಗಾಬರಿಗೊಳಿಸುವ ಈ ಅಂಕಿಸಂಖೆಗಳು ಕೆಲವರ ಪಾಲಿಗೆ ಪ್ರಗತಿಯ ಹೆಗ್ಗುರುತುಗಳು. ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿ ಕೂಡ ಸಮಾಜದ ಎಲ್ಲ ವರ್ಗಗಳವರೆಗೆ ಉನ್ನತ ಶಿಕ್ಷಣದ ಅವಕಾಶಗಳು ಲಭಿಸಬೇಕೆಂದು ಹೇಳಿದೆ. ಈ ವಿಷಯದಲ್ಲಿ ಪರಿಸ್ಥಿತಿ ಆಶಾದಾಯಕವಾಗಿಲ್ಲ. ಅಮೇರಿಕಾದಲ್ಲಿ ೧೮-೨೩ ವಯೋಮಾನದವರಲ್ಲಿ ಶೇಕಡಾ ೭೫ ಮಂದಿಗೆ ಉನ್ನತ ಅವಕಾಶಗಳು ಲಭಿಸಿವೆ. ಆದರೆ ನಮ್ಮಲ್ಲಿ ಈ ವಯೋಮಾನದ ಶೇಕಡಾ ೬ರಷ್ಟು ತರುಣ ತರುಣಿಯರಿಗೆ ಮಾತ್ರ ವ್ಯಾಸಂಗಾವಕಾಶಗಳು ಲಭಿಸಿವೆ.

ಪ್ರತಿವರ್ಷ ಕಾಲೇಜುಗಳು ಲಕ್ಷಗಟ್ಟಲೆ ಪದವೀಧರರನ್ನು ಉತ್ಪಾದಿಸಿ ಉದ್ಯೋಗ ಮಾರುಕಟ್ಟೆಗೆ ಎಸೆಯುತ್ತಿವೆ. ಇವರಲ್ಲಿ ಶೇಕಡಾ ೯೫ ಮಂದಿ 'ನಿರುದ್ಯೋಗಿ ವಿದ್ಯಾವಂತ'ರೆಂಬ ಹಣೆಪಟ್ಟಿ ಹೊತ್ತು ತಮ್ಮದಲ್ಲದ ಬದುಕು ಸಾಗಿಸುತ್ತಾರೆ. ಖಾಲಿ ಇರುವ ಉದ್ಯೋಗಗಳು, ಸೃಷ್ಟಿಯಾಗಲಿರುವ ಉದ್ಯೋಗಗಳು ಮತ್ತು ಇದಕ್ಕೆ ತಕ್ಕ ಮಾನವ ಸಂಪದಭಿವೃದ್ಧಿ ದೃಷ್ಟಿಕೋನ ನಮ್ಮಲ್ಲಿಲ್ಲ.

ಪ್ರಜಾಪ್ರಭುತ್ವವಾದಿ, ಸಮಾಜವಾದಿ, ವ್ಯವಸ್ಥೆಯೊಂದರಲ್ಲಿ ಮುಂದಿನ ಅಗತ್ಯಗಳನ್ನು ಮಾತ್ರ ದೃಷ್ಟಿಯಲ್ಲಿಟ್ಟುಕೊಂಡು 'ಪ್ರತಿಭೆ'ಯೆಂಬ ಪರೀಕ್ಷಾ ಅಂಕ ನಿರ್ಧಾರಿತ ಮಾನದಂಡವನ್ನಿಟ್ಟುಕೊಂಡು 'ಸೀಮಿತ ಪ್ರವೇಶ' ನೀತಿಯನ್ನು ಅನುಸರಿಸಲು ಸಾಧ್ಯವಾಗುವುದಿಲ್ಲ. ವ್ಯಾಪಕ ನಿರುದ್ಯೋಗವಿದ್ದರೂ ಮೇಲೆ ಹೇಳಿದ

ಕಾರಣದಿಂದಾಗಿ ಪದವಿ ಕಾಲೇಜುಗಳಿಗೆ ಬೇಡಿಕೆ ಹೆಚ್ಚುತ್ತಲೇ ಇದೆ. ಹೊಸ ಹೊಸ ಕಾಲೇಜುಗಳು ತಲೆ ಎತ್ತುತ್ತಲೇ ಇವೆ.

ಉನ್ನತ ಶಿಕ್ಷಣದ ಗುರಿಗಳ ಬಗೆಗೆ ಎರಡು ತೆರನಾದ ಅಭಿಪ್ರಾಯಗಳಿವೆ. ಒಂದು ಪದವಿ ಎಂಬುದು ಉದ್ಯೋಗ ದೊರಕಿಸಿ ಕೊಡುವ ಸಾಧನ. ಇನ್ನೊಂದು, ಉದ್ಯೋಗಕ್ಕಿಂತ ಜ್ಞಾನದಾಹ, ಪಾಂಡಿತ್ಯ ಮೋಹ ಮುಖ್ಯ. ಈ ಎರಡೂ ನೆಲೆಗಳಲ್ಲೂ ನಮ್ಮ ಉನ್ನತ ಶಿಕ್ಷಣಕ್ಷೇತ್ರ ವಿಫಲವಾಗಿದೆ. ನಾವು ನೀಡುವ ಪದವಿಶಿಕ್ಷಣ ನಮ್ಮ ಯುವಜನಾಂಗದವರನ್ನು ಕನಿಷ್ಠ ಗುಮಾಸ್ತರನ್ನೂ ಸಜ್ಜುಗೊಳಿಸುವುದಿಲ್ಲ. ಅವರು ಗಳಿಸುವ ವಿದ್ಯೆ ಅವರಲ್ಲಿ ಸ್ವಾವಲಂಬಿತ್ವವನ್ನು ಬೆಳೆಸುವುದಿಲ್ಲ. ಉದ್ಯೋಗವನ್ನು ಒದಗಿಸುವುದಿಲ್ಲ. ಜೀವನ ನಿರ್ವಹಣೆಯ ಶ್ರೇಷ್ಠ ಕ್ರಮವನ್ನೂ ಬೆಳೆಸುವುದಿಲ್ಲ. ಮತನಿರಪೇಕ್ಷತೆ, ಪ್ರಜಾಪ್ರಭುತ್ವ, ಸಹಿಷ್ಣುತೆ, ಕರ್ತವ್ಯಪ್ರಜ್ಞೆ, ಸೇವಾಮನೋಭಾವ, ರಾಷ್ಟ್ರಪ್ರೇಮ, ಸಮಾನತೆ ಮುಂತಾದ ಮೌಲ್ಯಗಳನ್ನೂ ರೂಢಿಸುವುದಿಲ್ಲ. ಜನಸಾಮಾನ್ಯರ ಬದುಕು, ಅವರ ನಂಬಿಕೆಗಳು ಪರಂಪರಾಗತ ಕುಲಕಸುಬುಗಳು, ನೆಲದ ಪ್ರೀತಿ, ತಾಯ್ನುಡಿಯ ಪ್ರೇಮ ಇವೆಲ್ಲದಕ್ಕೂ ಎರವಾಗುವ ಪರಕೀಯವಾಗುವ ಮನೋಭಾವನೆಯನ್ನು ಬೆಳೆಸಲು ಅದು ಸಮರ್ಥವಾಗಿದೆ. ಇಂಥ ಲಕ್ಷಾಂತರ ಪದವೀಧರರಿಂದ ಒಂದು ಸಮಾಜ ಏನನ್ನು ತಾನೆ ನಿರೀಕ್ಷಿಸಲು ಸಾಧ್ಯ? ಉದ್ಯೋಗವಿಲ್ಲ, ಆರ್ಥಿಕ ಸ್ವಾವಲಂಬನೆಯ ಬಗ್ಗೆ ತಿಳಿದಿಲ್ಲ, ಸ್ವತಂತ್ರವಾಗಿ ಏನನ್ನೂ ಮಾಡಲೂಬಾರದು – ಇಂಥ ವ್ಯಕ್ತಿಗಳು. ತಮ್ಮನ್ನು ಈ ಸ್ಥಿತಿಗೆ ತಂದ ಶಿಕ್ಷಣ ವ್ಯವಸ್ಥೆ ಹಾಗೂ ಸಮಾಜದ ಬಗೆಗೆ ರೋಷ, ವಿಷಾದ ಹಾಗೂ ಆಕ್ರೋಶ ತಳೆಯದೆ ಇರಲು ಸಾಧ್ಯವೇ?

ಸರಕಾರದ 'ಶಿಕ್ಷಣ ನೀತಿ' ಎಂಬುದು ಶಿಕ್ಷಣದ ಎಲ್ಲ ಹಂತಗಳನ್ನು ಆವರಿಸುತ್ತದೆ. ಉನ್ನತ ಶಿಕ್ಷಣ ಇದರ ಒಂದು ಅಂಗ. ೧೯೫೫ರಿಂದ ೧೯೭೫ರವರೆಗಿನ ಅವಧಿಯಲ್ಲಿ ದೇಶದ ಅತ್ಯುನ್ನತ ಮಟ್ಟದ ತಜ್ಞರು ಸೇರಿ ಕಾಲದಿಂದ ಕಾಲಕ್ಕೆ ನೀತಿ ನಿರೂಪಣೆ ಮಾಡಿದ್ದಾರೆ. ಶಿಕ್ಷಣವು ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಸುಧಾರಣೆಯ ಸಾಧನ ಎಂಬ ನಂಬಿಕೆಯ ಹಿನ್ನೆಲೆಯಲ್ಲಿ ನೀತಿ ನಿರೂಪಣೆಯ ಪ್ರಯತ್ನಗಳು ನಡೆದವು. ಪ್ರಜಾಪ್ರಭುತ್ವ, ಸಮಾಜವಾದ, ಮತ ನಿರಪೇಕ್ಷತೆಗಳ ತಳಹದಿಯನ್ನು ಒದಗಿಸುವ ಪ್ರಯತ್ನಗಳಾದವು. ಈ ಅವಧಿಯಲ್ಲಿ ಶಿಕ್ಷಣಕ್ಕೆ ವ್ಯಯಿಸುವ ಸಾರ್ವಜನಿಕ ನಿಧಿಯಲ್ಲಿ ಮೂರನೇ ಒಂದು ಭಾಗದಷ್ಟು ಮೊತ್ತ ಉನ್ನತ ಶಿಕ್ಷಣಕ್ಕಾಗಿ ವ್ಯಯವಾಗುತ್ತಿತ್ತು. ಪ್ರಾಥಮಿಕ ಶಿಕ್ಷಣವನ್ನು ಬಹುತೇಕ ಕಡೆಗಣಿಸಲಾಗಿತ್ತು. ಆದುದರಿಂದಲೇ ಜೆ.ಪಿ. ನಾಯಕ್ ಅವರು 'ಸ್ವಾತಂತ್ರ್ಯೋತ್ತರ ಅವಧಿಯನ್ನು ಅಕ್ಷರಶಃ ಉನ್ನತ ಶಿಕ್ಷಣದ ಯುಗವೆಂದು ಕರೆಯಬಹುದು' ಎಂದು ಬಣ್ಣಿಸಿದರು.

ಗುಣ, ಪರಿಮಾಣ ಹಾಗೂ ಸಮತೆ – ಹೀಗೆ ತ್ರಿಮುಖ ವಿಕಾಸದ ಕಲ್ಪನೆಯಿಂದ ಶಿಕ್ಷಣದ ಪಯಣ ಆರಂಭವಾದುದೇನೋ ನಿಜ. ಆದರೆ ಇವು ಮೂರೂ ಮುಪ್ಪುರಿಗೊಳ್ಳುವುದು ಸಾಧ್ಯವಾಗಲೇ ಇಲ್ಲ. ಪ್ರಮಾಣ ಹಾಗೂ ಸಮತೆಗೆ ಒಂದಿಷ್ಟು ನ್ಯಾಯ ಸಂದಿತು. ವಿಶ್ವವಿದ್ಯಾಲಯ ಶಿಕ್ಷಣದ ವ್ಯಾಪಕ ವಿಸ್ತರಣೆಯ ಕಾರ್ಯ ಚೆನ್ನಾಗಿ ಸಾಗಿತು. ವರ್ಗ ಪ್ರತಿಷ್ಠಿತರ ಕೈಸೆರೆಯಿಂದ ಹೊರಚಿಮ್ಮಿದ ಉನ್ನತ ಶಿಕ್ಷಣ ಜನಸಮೂಹಕ್ಕೆ ಲಭಿಸಲಾರಂಭಿಸಿತು. ಆದರೆ ಸಮೂಹ ಶಿಕ್ಷಣವು ಗುಣಕ್ಕೆ ತಿಲಾಂಜಲಿ ನೀಡದೆ ಬೇರೆ ಗತ್ಯಂತರವಿಲ್ಲ. ಹೀಗಾಗಿ ೧೦೦–೧೨೦ ವಿದ್ಯಾರ್ಥಿಗಳ ಸಂದೋಹದ ಮುಂದೆ ಸುಮ್ಮನೆ ಕೈಕಟ್ಟಿ ನಿಲ್ಲುವ ಪರಿಸ್ಥಿತಿ. ಆಗ ವೇತನ ಶ್ರೇಣಿ, ಭಡ್ತಿ, ಸ್ಥಾನಮಾನ ಇತ್ಯಾದಿಗಳೇ ತಲೆಯಲ್ಲಿ ತಿರುಗುತ್ತದೆ. ವಿದ್ಯಾರ್ಥಿ ಪ್ರಗತಿ, ವೃತ್ತಿಪರತೆ, ದಕ್ಷತೆ ಇವೆಲ್ಲ 'ಬರೀ ಬೊಗಳೆ' ಎಂದು ಎನ್ನಿಸಿಬಿಡುತ್ತದೆ. ರೋಗಿ ತನ್ನ ಸಾವನ್ನು ತಾನೇ ನಿರೀಕ್ಷಿಸುತ್ತಾ ದಿನವೂ ನೋವುಣ್ಣುವ ಸ್ಥಿತಿ ಇದು. ದುರ್ದೈವವೆಂದರೆ ಇಲ್ಲಿ ಸಾವು ಅಸಂಭವನೀಯ. ಅಭಿವ್ಯಕ್ತಿಯ ಆಕಾಂಕ್ಷೆ, ಸೃಷ್ಟಿಶೀಲ ಸಾಮರ್ಥ್ಯಗಳಿರುವ ಶಿಕ್ಷಕ ಮಾತ್ರವೇ ತನ್ನ ಅಂತರಂಗದಲ್ಲಿ ನಂದಾದೀಪ ಬೆಳಗಿಸಲು ಹೆಣಗುತ್ತಾರೆ.

ಬೋಧನೆ, ಸಂಶೋಧನೆ ಹಾಗೂ ಪ್ರಸಾರ ಒಂದು ವಿಶ್ವವಿದ್ಯಾಲಯದ ಗುರಿ. ಹಿಂದೆ ವಿಶ್ವವಿದ್ಯಾಲಯಗಳ ಪ್ರಸಾರಾಂಗಗಳು ಮಾಹಿತಿ ಹಾಗೂ ಜ್ಞಾನಪ್ರಸಾರವನ್ನು ತಮ್ಮ ಆದ್ಯ ಕರ್ತವ್ಯವೆಂದು ಬಗೆದಿದ್ದವು. ಆದರೆ ಈಗ ವಿಶ್ವವಿದ್ಯಾಲಯಗಳು ತಮ್ಮಲ್ಲಿ ನಡೆದ ಸಂಶೋಧನೆಯ ಫಲಶ್ರುತಿಯನ್ನು ವಿಚಾರಮಂಥನಗಳ ಸಾರವನ್ನು ಪ್ರಚುರಪಡಿಸಲು ಆರ್ಥಿಕ ಮುಗ್ಗಟ್ಟಿನ ನೆಪವೊಡ್ಡಿ ಹಿಂದೇಟು ಹಾಕುತ್ತಿದೆ. ಜ್ಞಾನಪ್ರಸಾರದ ಕಾರಣದಿಂದಲಾದರೂ ವಿಶ್ವವಿದ್ಯಾಲಯಗಳ ತಜ್ಞರು ಜನಸಾಮಾನ್ಯರೊಂದಿಗೆ ಬೆರೆಯಲು, ವಿಚಾರವಿನಿಮಯ ಮಾಡಲು ಪ್ರಸಾರಾಂಗಗಳ 'ಪ್ರಚಾರೋಪನ್ಯಾಸ ಮಾಲಿಕೆ'ಯ ಮೂಲಕ ಸಾಧ್ಯವಾಗುತ್ತಿತ್ತು. ಆದರೆ ಬೆಟ್ಟಗುಡ್ಡಗಳ ಮೇಲೆ ಸ್ಥಾಪಿತವಾಗಿರುವ ನಮ್ಮ ವಿಶ್ವವಿದ್ಯಾಲಯಗಳು ಪ್ರಸ್ತುತ ಸಂದರ್ಭದಲ್ಲಿ 'ದೀಪಸ್ತಂಭ' ಗಳಾಗುವ ಬದಲಿಗೆ 'ದಂತಗೋಪುರ'ಗಳಾಗಿವೆ.

ತೊಂಭತ್ತರ ದಶಕದಿಂದೀಚೆಗೆ ಉದಾರೀಕರಣ, ಜಾಗತೀಕರಣ, ಖಾಸಗೀಕರಣ, ವ್ಯಾಪಾರೀಕರಣ ಹಾಗೂ ಮಾರುಕಟ್ಟೆಯ ನೀತಿ ಈ ಕ್ಷೇತ್ರವನ್ನು ಪೂರ್ತಿ ಕುಲಗೆಡಿಸುತ್ತದೆ. ನಮ್ಮ ಸರಕಾರಗಳ ಪಾಲಿಗೆ ಉನ್ನತ ಶಿಕ್ಷಣವು 'ಅನುತ್ಪಾದಕ' ವಸ್ತು. ಅದಕ್ಕೆ ಈಗಾಗಲೆ ಸರಕಾರ ಸಾಕಷ್ಟು ರಿಯಾಯಿತಿ ತೋರಿಸಿದ್ದಾಗಿದೆ. ಆದ್ದರಿಂದ ಅದಕ್ಕೆ ಯಾವ ವಿನಾಯಿತಿಯ ಅಗತ್ಯವಿಲ್ಲವೆಂದು ಭಾವಿಸಿ ಆಯವ್ಯಯ ಪತ್ರಗಳಲ್ಲಿ ಅದಕ್ಕಾಗಿ ಅಲ್ಪಮೊತ್ತವನ್ನು ಮೀಸಲಿಡಲು ಸರಕಾರಗಳು ಉನ್ನತ ಶಿಕ್ಷಣ ಕ್ಷೇತ್ರದಿಂದ ಹಿಂದೆ ಸರಿಯುತ್ತಿದ್ದು ಖಾಸಗಿ ವಿಶ್ವವಿದ್ಯಾಲಯಗಳು, ಡೀಮ್ಡ್ ವಿಶ್ವವಿದ್ಯಾಲಯಗಳು, ವಿದೇಶಿ ವಿಶ್ವವಿದ್ಯಾಲಯಗಳು, ಸ್ವಧನಸಹಾಯ

ವಿಶ್ವವಿದ್ಯಾಲಯಗಳು ತಲೆ ಎತ್ತುತ್ತಿವೆ. ಹಾಲಿ ವಿಶ್ವವಿದ್ಯಾಲಯಗಳು ತಮ್ಮ ಆರ್ಥಿಕ ಭದ್ರತೆಗಾಗಿ ನಯವಾದ ಬಗೆಯಲ್ಲಿ 'ತಲೆಗಂದಾಯ' ವಸೂಲು ಮಾಡಲು ಹೊರಟಿವೆ. ಭಾರತೀಯ ವಿಶ್ವವಿದ್ಯಾಲಯಗಳಲ್ಲಿ ಕಡಿಮೆ ದರದಲ್ಲಿ ಕಲಿತ ಬಹಳಷ್ಟು ವೃತ್ತಿಪರ ವ್ಯಕ್ತಿಗಳೆಲ್ಲ ಅಮೇರಿಕ, ಇಂಗ್ಲೆಂಡ್‌ಗೆ ಹಾರಿಹೋಗುವ 'ಪ್ರತಿಭಾಪಲಾಯನ' ವ್ಯಾಪಕವಾಗುತ್ತಿದೆ. ಸ್ವದೇಶಿ ಮಂತ್ರ ಪಠಿಸುತ್ತಾ ವಿದೇಶಿ ವಿಶ್ವವಿದ್ಯಾಲಯಗಳಲ್ಲಿ ಕಂಡುಬರುವ 'ಎಕ್ರೆಡಿಟೇಶನ್' ಕಲ್ಪನೆಯನ್ನು ಅನಾಮತ್ತಾಗಿ ಎತ್ತಿಕೊಂಡು ನಮ್ಮಲ್ಲೂ ಅಳವಡಿಸಲಾಗುತ್ತಿದೆ. ಇದರಿಂದಾಗಿ 'ಶೈಕ್ಷಣಿಕ ಕೊಳೆಗೇರಿಗಳು' ಸ್ವಚ್ಛವಾಗುವ ಬದಲಾಗಿ ಅವುಗಳು ಸಂಖ್ಯೆ ಹೆಚ್ಚಲಿವೆ.

ಶಿಕ್ಷಣದ ವ್ಯಾಪಾರೀಕರಣವು ಶಿಕ್ಷಣವನ್ನು ದಂಧೆಯ ಮಟ್ಟಕ್ಕೆ ಇಳಿಸಿ 'ಸಾಮಾಜಿಕ ನ್ಯಾಯ'ವನ್ನು ಗಾಳಿಗೆ ತೂರುತ್ತದೆ. ವಿದ್ಯಾರ್ಥಿಯಿಂದ ವಿದ್ಯಾಭ್ಯಾಸಕ್ಕೆ ತಗಲುವ ಪೂರ್ಣವೆಚ್ಚವನ್ನು ಪಡೆದುಕೊಳ್ಳುವ ಪ್ರವೃತ್ತಿ ಆರಂಭವಾಗಿದೆ. 'ದುಡ್ಡು ಕೊಡುವ ತಾಕತ್ತಿರುವವರು ಬರಲಿ, ಉಳಿದವರಿಗೆ ನಾವು ಪ್ರವೇಶ ಕೊಡುವುದಿಲ್ಲ' ಎಂಬ ಧೋರಣೆ ಬಲವಾಗುತ್ತಿದೆ. ಲಾಭನಷ್ಟದ ತಕ್ಕಡಿಯ ವ್ಯಾಪಾರಿಬುದ್ಧಿ ಯಾವತ್ತೂ ತಕ್ಕಡಿಯನ್ನೇ ಚಿಂತಿಸುತ್ತದೆ. ಉನ್ನತ ಶಿಕ್ಷಣದ ಪ್ರಸ್ತುತ ಸ್ಥಿತಿಯಲ್ಲಂತೂ ಶಿಕ್ಷಕರ ಸ್ಥಾನವೇ ಶೂನ್ಯ. ಕಡಿಮೆ ಸಂಬಳ, ಹೆಚ್ಚಿನ ದುಡಿಮೆ, ವ್ಯಾಪಕ ಶೋಷಣೆ ಮಿತಿಮೀರುತ್ತಿದೆ. ಪ್ರತಿಭಾವಂತರನ್ನು ಶಿಕ್ಷಕ ವೃತ್ತಿಗೆ ಆಹ್ವಾನಿಸಬೇಕೆಂಬ ಯುಜಿಸಿಯ ಧ್ಯೇಯ ಧೂಳೀಪಟವಾಗಿದೆ.

ಜಾಗತೀಕರಣದ ದೆಸೆಯಿಂದಲೂ ಶಿಕ್ಷಣರಂಗದಲ್ಲಿ 'ಸಮುದಾಯ ಸಹಭಾಗಿತ್ವ' ಎಂಬ ಹೊಸ ಸೊಲ್ಲು ಕೇಳಿ ಬರುತ್ತಿದೆ. ಸರಕಾರೇತರ ಸಂಸ್ಥೆಗಳು ಹಾಗೂ ಅವುಗಳ ಕಾರ್ಯಕರ್ತರನ್ನು 'ಅಭಿವೃದ್ಧಿಯಲ್ಲಿ ಪಾಲುಗಾರರು' ಎಂದು ಪರಿಭಾವಿಸಬೇಕು ಎಂಬ ಆದೇಶಗಳು ಕೇಳಿ ಬರುತ್ತಿದೆ. ಈ ಸರಕಾರೇತರ ಸಂಸ್ಥೆಗಳಿಗೆ ಶಿಕ್ಷಣ ಸಂಸ್ಥೆಗಳನ್ನು ನಡೆಸಲು 'ಪ್ರಗತಿಪರ ವಿಚಾರಧಾರೆ ಆಧಾರಿತ' ಶೈಕ್ಷಣಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ಮತ್ತು ಸುತ್ತಮುತ್ತಲಿನ ಶಿಕ್ಷಣ ಸಂಸ್ಥೆಗಳನ್ನು ದತ್ತು ತೆಗೆದುಕೊಂಡು ಉತ್ತಮ ಪಡಿಸಲು ಅವಕಾಶ ನೀಡಬೇಕೆಂದು ವಾದಿಸಲಾಗುತ್ತಿದೆ.

ಶಿಕ್ಷಣರಂಗ ಸರಕಾರದ ಏಕಸ್ವಾಮ್ಯವಾಗಬಾರದು. ಸದ್ಯ ಶಿಕ್ಷಣದ ಮೇಲೆ ಬಂಡವಾಳ ಹೂಡಲು ಸರಕಾರ ಹಣಕಾಸಿನ ಕೊರತೆ ಅನುಭವಿಸುತ್ತಿದೆ. ಅಖಂಡ ದಕ್ಷಿಣ ಕನ್ನಡ ಜಿಲ್ಲೆಯ ಸಮಗ್ರ ಅಭಿವೃದ್ಧಿಯಲ್ಲಿ ಸರಕಾರದ ಪಾತ್ರ ಗೌಣ. ಖಾಸಗಿಯವರ, ಸಾರ್ವಜನಿಕರ ಪಾತ್ರ ಅಧಿಕ.

ಆದರೆ ವಿಶ್ವಬ್ಯಾಂಕ್ ಸೂಚಿಸುತ್ತದೆ ಎಂಬ ಕಾರಣಕ್ಕೆ 'ಹೊಸರಾಗ' ಎಂಬಂತೆ ಸಮುದಾಯದ ಭಾಗಿತ್ವವನ್ನು ಕುರಿತು ಚಿಂತನೆ ನಡೆಯುತ್ತಿದೆ. ಸರಕಾರೇತರ ಸಂಸ್ಥೆಗಳಿಗೆ ರಾಜಮಾರ್ಗ ತೆರೆದು ತೋರುವ

ಸಂದರ್ಭದಲ್ಲಿ ಅವುಗಳ ಮೂಲೋದ್ದೇಶ. ಕಾರ್ಯವೈಖರಿ ಇತ್ಯಾದಿಗಳನ್ನು ಕೂಲಂಕುಷವಾಗಿ ಸಾರ್ವಜನಿಕ ಸಮೀಕ್ಷೆಗೆ ಒಳಪಡಿಸುವುದನ್ನು ಮರೆಯಬಾರದು. ವಿಶ್ವಬ್ಯಾಂಕ್ ಕಲಿಸಿಕೊಟ್ಟಿರುವ ವಿಕೇಂದ್ರೀಕರಣ, ಸೂಕ್ಷ್ಮ ಯೋಜನೆ, ಸ್ಥಳೀಯ ಯೋಜನೆ ಇತ್ಯಾದಿ ಮಂತ್ರಗಳು ತುಟಿಯ ಮೇಲಷ್ಟೇ ಹೊರಹೊಮ್ಮಿದರೆ ಸಾಲದು. ಅಂತರಂಗದಿಂದ ಹೊರಹೊಮ್ಮಬೇಕು. ಮಂತ್ರ ಕಾರ್ಯತಂತ್ರವಾಗಿ ಫಲಿಸಬೇಕು.

ಜಾಗತೀಕರಣ, ಖಾಸಗೀಕರಣ, ವಾಣಿಜ್ಯೀಕರಣದಿಂದ ಪ್ರತಿಯೊಂದು ಕ್ಷೇತ್ರದಲ್ಲೂ ಸರಕಾರದ ಹಸ್ತಕ್ಷೇಪ ಕಡಿಮೆಯಾಗಬೇಕು. ಸಂಸ್ಥೆಗಳನ್ನು ಖಾಸಗಿಯವರಿಗೆ ವಹಿಸಿಕೊಡಬೇಕು ಎಂಬ ಮಾತುಗಳಿಗೆ ಬೆಲೆ ಬರುತ್ತಿದೆ. ಖಾಸಗೀಕರಣದಿಂದಾಗಿ ಸ್ಪರ್ಧೆ ಹೆಚ್ಚಲಿದೆ. ಸ್ಪರ್ಧೆಯ ವಾತಾವರಣದಿಂದಾಗಿ ಉತ್ತಮ ಫಲಿತಾಂಶಗಳು ಲಭಿಸಲಿವೆ. ಜನರಿಗೆ ಉತ್ತಮ ಸೇವೆ ದೊರೆಯಲಿದೆ ಎಂಬ ಆಶಾವಾದ ವ್ಯಕ್ತವಾಗುತ್ತಿದೆ. ಹೀಗಾಗಿ ವಿದ್ಯುಚ್ಛಕ್ತಿ ಮಂಡಲಿ, ನಗರ ಸಾರಿಗೆ, ದೂರವಾಣಿ ಸೇವೆ ಇತ್ಯಾದಿಗಳನ್ನು ಖಾಸಗಿಯವರಿಗೆ ವಹಿಸಿಕೊಡುವ ಪ್ರಸ್ತಾವದಂತೆಯೇ, ಖಾಸಗಿ ವಿಶ್ವವಿದ್ಯಾಲಯಗಳ ಸ್ಥಾಪನೆಯ ಸಾಧ್ಯತೆ ಪ್ರಬಲವಾಗಿದೆ.

ಇದುವರೆಗೆ ಶಿಕ್ಷಣರಂಗದಲ್ಲಿ ಖಾಸಗಿಯವರ ಪಾತ್ರ ಇರಲಿಲ್ಲವೆಂದಲ್ಲ. ಹಾಗೆ ನೋಡಿದರೆ, ಕ್ರೈಸ್ತಮಿಶನರಿಗಳು, ಮಠಮಾನ್ಯರುಗಳು, ದಾನಿಗಳು, ಶ್ರೀಮಂತರು, ವಿವಿಧ ಸಂಘಟನೆಗಳು ಶಾಲಾಕಾಲೇಜುಗಳನ್ನು ಧಾರಾಳವಾಗಿ ತೆರೆದು ವಿದ್ಯಾಪ್ರಸಾರದ ಕಾರ್ಯವನ್ನು ಮಾಡಿವೆ. ಆದರೆ ಈ ಹಿಂದೆ ಖಾಸಗಿಯವರು ವಿದ್ಯಾಕ್ಷೇತ್ರಕ್ಕೆ ಕೈಹಾಕಿದಾಗ ಸಮಾಜ ಸೇವೆ, ಸಮುದಾಯ ಸೇವೆಯೇ ಅವರ ಆದ್ಯ ಕರ್ತವ್ಯವೆನಿಸಿತ್ತು. ಆದರೆ ಇಂದು, ಈ ಬಗೆಯ ಸೇವೆಗಿಂತಲೂ 'ಶಿಕ್ಷಣದ ಅಂಗಡಿ'ಗಳನ್ನು ತೆರೆದು ಲಾಭಗಳಿಸುವುದೇ ಪ್ರಧಾನವಾಗಿದೆ. ಈ ಬಗೆಯ ಲಾಭಕೋರತನ ತನ್ನಷ್ಟಕ್ಕೆ ತಾನೇ ಕೆಟ್ಟದ್ದಲ್ಲ. ಇದು ಸಹಜ ಸ್ವಾಭಾವಿಕ ಕೂಡಾ. ಸಂಸ್ಥೆಗಳನ್ನು ಸ್ಥಾಪಿಸಿದ ಮೇಲೆ ಅವುಗಳನ್ನು ನಡೆಸುವುದು, ಗುಣಮಟ್ಟ ಕಾಪಾಡುವುದು, ಶಿಕ್ಷಕರಿಗೆ ಮತ್ತು ವಿದ್ಯಾರ್ಥಿಗಳಿಗೆ ಉತ್ತಮ ಸೌಲಭ್ಯಗಳನ್ನು ಒದಗಿಸುವುದು ಆಡಳಿತ ಮಂಡಳಿಗಳ ಹೊಣೆಗಾರಿಕೆ. ವಿದ್ಯಾರ್ಥಿಗಳು ನೀಡುವ ಶುಲ್ಕ ಅಥವಾ ದಾನಶುಲ್ಕಗಳ ಮೂಲಕ ಈ ಹೊಣೆಗಾರಿಕೆಯನ್ನು ಆಡಳಿತ ಮಂಡಳಿಗಳು ನಿರ್ವಹಿಸುತ್ತವೆ. ಆದರೆ ಕೆಲವೊಂದು ಆಡಳಿತ ಮಂಡಳಿಗಳು ಈ ಉದ್ದೇಶವನ್ನು ಒಂದು ಅಲೆಗೆ ಎಳೆದೊಯ್ಯುತ್ತದೆ. ಆಗ ಶಿಕ್ಷಣ ಉಳ್ಳವರ ಸೊತ್ತಾಗುತ್ತದೆ. ಕೊಳ್ಳುವ ಶಕ್ತಿ ಉಳ್ಳವರಿಗೆ ಮಾತ್ರ ವಿದ್ಯೆ ದೊರಕುತ್ತದೆ. ಹಣ ಕೊಟ್ಟು ಕೊಳ್ಳಲಾಗದವರು ವಿದ್ಯಾಭ್ಯಾಸದ ಅವಕಾಶಗಳಿಂದ ವಂಚಿತರಾಗುತ್ತಾರೆ. ಹೀಗಾಗಿ 'ಎಲ್ಲರಿಗೂ ಶಿಕ್ಷಣ, ಸರ್ವಸಮಾನತೆಯ ಸಮಾಜ ಸ್ಥಾಪನೆ' ಎಂಬ ಗುರಿಗಳು ಅಪೂರ್ಣವಾಗುತ್ತದೆ. ಈ ಕಾರಣಗಳಿಂದಾಗಿ ಹಲವರು ಖಾಸಗಿ ಶಿಕ್ಷಣ ಸಂಸ್ಥೆಗಳನ್ನು ಗುಮಾನಿಯಿಂದ ನೋಡುವರಲ್ಲದೆ ಸರಕಾರ

ಇವುಗಳ ಮೇಲೆ ನಿಯಂತ್ರಣ ಹೇರಬೇಕು ಎಂದು ವಾದಿಸುತ್ತಾರೆ. ಸರಕಾರ ನಮಗೆ ಆರ್ಥಿಕ ನೆರವು ನೀಡದಿರುವಾಗ ಅದು ನಿರ್ಬಂಧಗಳನ್ನೇಕೆ ಹೇರಬೇಕು ಎಂಬುದು ಖಾಸಗಿಯವರ ಪ್ರತಿವಾದ.

ಎಲ್ಲರಿಗೂ ಅಗತ್ಯವಾದ ಪ್ರಾಥಮಿಕ ಶಿಕ್ಷಣವನ್ನು ಸಾರ್ವತ್ರೀಕರಣಗೊಳಿಸುವುದು ನಮ್ಮಿಂದ ಆಗಲಿಲ್ಲ. ಅದೊಂದು ಕನಸಾಗಿಯೇ ಉಳಿದಿವೆ. ಒಂದೆಡೆ ಸರಕಾರದ ಬಳಿ ಶಿಕ್ಷಣಕ್ಕಾಗಿ ವ್ಯಯಿಸಲು ಹಣವಿಲ್ಲ. ಇನ್ನೊಂದೆಡೆ ಈ ದೇಶದ ಶೇಕಡಾ ಆರರಷ್ಟು ಮಂದಿಗೆ ಮಾತ್ರ ತಲುಪುವ ಉನ್ನತ ಶಿಕ್ಷಣಕ್ಕಾಗಿ ಅಪಾರ ಹಣ ವ್ಯಯವಾಗುತ್ತಿದೆ. ಈ ಮೊತ್ತದಲ್ಲೂ ಶೈಕ್ಷಣಿಕ ಅಭಿವೃದ್ಧಿಗೆ ದೊರೆಯುವ ಪಾಲು ತೀರ ನಗಣ್ಯ. ಈಚೆಗೆ ಮತ್ತೆ ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣ, ಎಲ್ಲರಿಗೂ ಶಿಕ್ಷಣ ಎಂಬ ಕೂಗು ಮೊಳಗಿವೆ. ಹೀಗಾಗಿ ಸರಕಾರ ಉನ್ನತ ಶಿಕ್ಷಣಕ್ಕೆ ನೀಡುವ ಮೊತ್ತದಲ್ಲಿ ಕಡಿತ ಮಾಡುತ್ತಿದೆ. ವಿಶ್ವವಿದ್ಯಾಲಯಗಳು ಸಂಪನ್ಮೂಲಗಳನ್ನು ತಾವೇ ಕಂಡುಕೊಳ್ಳಬೇಕೆಂದು ಸರಕಾರ ಹೇಳುತ್ತಿದೆ. ಈ ಹಿನ್ನೆಲೆಯಲ್ಲಿ ವಿಶ್ವವಿದ್ಯಾಲಯ ಹಾಗೂ ಉದ್ದಿಮೆ ಸಂಬಂಧ ಸ್ವದೇಶಿ ಹಾಗೂ ವಿದೇಶಿ ವಿಶ್ವವಿದ್ಯಾಲಯಗಳ ನಡುವಣ 'ಕೂಟಿಕೆ', ವಿಶ್ವವಿದ್ಯಾಲಯಗಳ ಖಾಸಗೀಕರಣ, ಖಾಸಗಿ ವಿಶ್ವವಿದ್ಯಾಲಯಗಳ ಸ್ಥಾಪನೆ ಮುಂತಾದ ಕಲ್ಪನೆಗಳಿಗೆ ಚಾಲನೆ ದೊರೆತಿವೆ.

ಖಾಸಗೀಕರಣದಿಂದಾಗಿ ವಿಶ್ವವಿದ್ಯಾಲಯಗಳು ಅನುದಾನಗಳಿಗಾಗಿ ಸರಕಾರದ ಬಳಿ ಅಂಗಲಾಚಬೇಕಾಗಿಲ್ಲ. ಖಾಸಗಿ ವಿಶ್ವವಿದ್ಯಾಲಯಗಳ ಸ್ಥಾಪನೆಯಿಂದಾಗಿ ಸ್ವಧನ ಸಹಾಯ ವ್ಯವಸ್ಥೆ ಜಾರಿಗೆ ಬರಲಿದೆ. ವಿಶ್ವವಿದ್ಯಾಲಯ ನಿರ್ವಹಣೆಗೆ ಬೇಕಾಗುವ ನಿಧಿಯನ್ನು ಶುಲ್ಕಗಳು, ದಾನಶುಲ್ಕ, ದೇಣಿಗೆಗಳು, ಸಂಘಟನೆಗಳು ಮತ್ತು ಉದ್ದಿಮೆಗಳು ನೀಡುವ ಅನುದಾನಗಳ ಮೂಲಕ ಸಂಗ್ರಹಿಸಲು ಸ್ವಾತಂತ್ರ್ಯ ಲಭಿಸುತ್ತದೆ.

ಕರ್ನಾಟಕದಲ್ಲಿ ಕಳೆದ ಒಂದೂವರೆ ದಶಕದಿಂದಲೂ ಕಾಲೇಜು ಶಿಕ್ಷಣದಲ್ಲಿ ಶಿಕ್ಷಕರ ಹಾಗೂ ಶಿಕ್ಷಕೇತರ ನೇಮಕಾತಿ ಆಗಿಲ್ಲ. ಅನುದಾನಿತ ಕಾಲೇಜುಗಳಲ್ಲಿ ಶಿಕ್ಷಕರ ನೇಮಕಾತಿಗೆ ಈಗ ಸರಕಾರ ಅನುಮೋದನೆ ನೀಡಿದರೂ ಪರಿಸ್ಥಿತಿ ಇನ್ನೂ ಸುಧಾರಿಸಿಲ್ಲ. ಹಲವು ಕಾಲೇಜುಗಳಲ್ಲಿ ಖಾಯಂ ಉಪನ್ಯಾಸಕರು ನಿವೃತ್ತರಾಗುತ್ತಲಿದ್ದು ಅರೆಕಾಲಿಕ, ತಾತ್ಕಾಲಿಕ ಉಪನ್ಯಾಸಕರ ಸಂಖ್ಯೆ ಏರುತ್ತಿದೆ. ಒಂದಲ್ಲ ಒಂದು ದಿನ, ತಮ್ಮ ಅರ್ಹತೆಗೆ ತಕ್ಕಂತೆ ಖಾಯಂ ಹುದ್ದೆ ಹಾಗೂ ಯುಜಿಸಿ ವೇತನ ದೊರೆಯುತ್ತದೆಂದು ಇವರೆಲ್ಲ ಕನಸು ಕಾಣುತ್ತಲಿದ್ದರು. ಇದೀಗ ಈ ಹುದ್ದೆಗಳೆಲ್ಲ ಅನುದಾನರಹಿತವಾದರೆ ಮುಂದೆ ತೆರೆವಾಗುವ ಹುದ್ದೆಗಳೆಲ್ಲ ಶಾಶ್ವತ ಅನುದಾನ ರಹಿತವಾದರೆ ಉನ್ನತ ಶಿಕ್ಷಣಕ್ಕೆ 'ಪ್ರತಿಭಾವಂತ ಶಿಕ್ಷಕ'ರನ್ನು ಆಕರ್ಷಿಸುವ ಸರಕಾರದ ಧೋರಣೆ ಹೇಗೆ ತಾನೆ ಈಡೇರಲು ಸಾಧ್ಯ. ಆಡಳಿತ ಮಂಡಳಿಗಳು ಕೊಟ್ಟಷ್ಟು ದಕ್ಷಿಣೆ ಪಡೆಯಬೇಕು. ಅವರ ಎಲ್ಲ 'ಇಶಾರಾ'ಗಳಿಗೆ ತಕ್ಕಂತೆ ನರ್ತಿಸಬೇಕು. ಸೇವಾ ಭದ್ರತೆ ಇಲ್ಲ. 'ಇಂದು ಇಲ್ಲಿ, ನಾಳೆ ಇನ್ನೆಲ್ಲೋ'

ಎಂಬ ಸ್ಥಿತಿಯಿಂದಾಗಿ ಉಪನ್ಯಾಸಕರು ಸಂಸ್ಥೆಯ ಜೊತೆ ಗುರುತಿಸಿಕೊಳ್ಳಲಾರರು. ಹೀಗಾದರೆ ಶ್ರದ್ಧೆ, ನಿಷ್ಠೆ, ವಿಷಯಪ್ರೇಮ, ವಿದ್ಯಾರ್ಥಿ ಪ್ರೀತಿ ಇತ್ಯಾದಿ 'ಕಲ್ಯಾಣಗುಣ'ಗಳನ್ನು ನಾವು 'ಅನುದಾನರಹಿತ ಶಿಕ್ಷಕ' ರೆಂಬ ಹೊಸವರ್ಗದಿಂದ ನಿರೀಕ್ಷಿಸಲು ಸಾಧ್ಯವೇ? ಬಡವ–ಶ್ರೀಮಂತ ಎಂಬ ಭೇದವನ್ನು ಸರಕಾರ ಇಲ್ಲಿಯೂ ಉಂಟು ಮಾಡುತ್ತದೆ ಎಂದೆನಿಸದಿರದು.

ಈ ದೇಶದ ಮಧ್ಯಮವರ್ಗದ ರಾಜಕೀಯ ವ್ಯವಸ್ಥೆ, ಎಲೆಕ್ಟ್ರಾನಿಕ್ ಮಾಧ್ಯಮ ಹಾಗೂ ಮಾಹಿತಿ ತಂತ್ರಜ್ಞಾನಪರ ಒಲವು ಈ ಮೂರರ ನಡುವೆ ಏನೋ ಒಳಸಂಬಂಧ ಇರುವ ಹಾಗಿದೆ. ಒಂದೇ ಮತ, ಒಂದೇ ಅಭಿಪ್ರಾಯ, ಒಂದೇ ಧರ್ಮ, ಸಮತಟ್ಟಾದ ಸಂಸ್ಕೃತಿ ಇರಬೇಕೆಂಬುದು ಮಧ್ಯಮವರ್ಗದ ರಾಜಕೀಯ ಹುನ್ನಾರ. ಎಲ್ಲ ವಿಶಿಷ್ಟತೆಗಳನ್ನು ಕರಗಿಸಿ ಬಹುವಚನಗಳನ್ನೆಲ್ಲ ಏಕವಚನವನ್ನಾಗಿಸುವ ಏಕರೂಪತೆಯ ಅಭಿರುಚಿ ನಿರ್ಮಾಣ ಮಾಡುವ ದೂರದರ್ಶನ, ಮೂಲವಿಜ್ಞಾನ, ಕಲೆ ಸಾಹಿತ್ಯ, ಸಂಗೀತ ಇದ್ಯಾವುದೂ ವಿದೇಶೀ ವಿನಿಮಯಗಳನ್ನು ಗಳಿಸಿಕೊಡಲಾರದು. ಕಂಪ್ಯೂಟರ್ ಸಾಕ್ಷರತೆ ಹಾಗೂ ಮಾಹಿತಿ ತಂತ್ರಜ್ಞಾನವೊಂದೇ ಮೋಕ್ಷಕ್ಕೆ ಇರುವ ಏಕೈಕ ಮಾರ್ಗ. 'ಭಾರತ ಬಿಟ್ಟು ತೊಲಗಿರಿ, ಹಿಡಿತುಂಬಾ ಡಾಲರ್ ಗಳಿಸಿರಿ' ಎಂಬ ಮಂತ್ರದ ದೆಸೆಯಿಂದಾಗಿ ಪದವಿ ಕಾಲೇಜುಗಳು ಅನಾಥವಾಗುವ ಸ್ಥಿತಿ. ಈ ಮೂರು ಅಂಗಗಳಲ್ಲಿ ಸಮನ್ವಯ ಕಂಡುಬರುತ್ತಿರುವುದು ನಮ್ಮ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಹಾಗೂ ರಾಜಕೀಯ ಜೀವನಕ್ಕೆ ಒದಗಿದ ದೊಡ್ಡ ಗಂಡಾಂತರ.

'ಮಾಹಿತಿ ತಂತ್ರಜ್ಞಾನವೇ ಪರಮಶ್ರೇಷ್ಠ ಕಂಪ್ಯೂಟರ್ ಎಂಬುದೇ ಪರದೈವ' ಎಂಬ ಅಭಿಪ್ರಾಯವನ್ನು ಸರಕಾರಗಳು ಹಾಗೂ ಕೆಲವು ತಜ್ಞರು ಬಿಂಬಿಸುತ್ತಾರೆ. ಮಾಹಿತಿ ಸೃಷ್ಟಿಯಾದರೆ ತಾನೇ ಮಾಹಿತಿ ತಂತ್ರಜ್ಞಾನ? ನಿಮ್ಮ ಮೆದುಳು ಗಟ್ಟಿಯಾಗಿದ್ದ ಮಾತ್ರವೇ ಕಂಪ್ಯೂಟರ್. ಆದುದರಿಂದ ಈ ದೇಶದಲ್ಲಿ ನಿಜವಾದ ಆಗಬೇಕಾದುದು ಕಂಪ್ಯೂಟರ್ ಆರಾಧನೆ ಅಲ್ಲ. ಜ್ಞಾನದ ಆರಾಧನೆ. ಹಳೆಯ ಜ್ಞಾನವನ್ನು ಹೊಸ ಸಾಕ್ಷ್ಯಗಳ ಬೆಳಕಿನಲ್ಲಿ ವಿಶ್ಲೇಷಣೆ ಮಾಡುವ, ವಾದಕ್ಕೆ ಎದುರಾಗಿ ಇನ್ನೊಂದು ವಾದವನ್ನು ಮಂಡಿಸುವ, ಮಂಡಿಸಿದ ವಾದವನ್ನು ಬಂಡಿಸುವ ತನ್ಮೂಲಕ ಹೊಸ ತತ್ವ ಬೋಧೆ ಮಾಡಿಕೊಳ್ಳುವ ಪ್ರಕ್ರಿಯೆಗೆ ಮನ್ನಣೆ ಸಿಗಬೇಕು. ಕಾಲಕ್ಕೆ ತಕ್ಕಂತೆ ವಿಶ್ಲೇಷಣೆ, ಸಂಶ್ಲೇಷಣೆ ಹಾಗೂ ಸೃಷ್ಟಿಶೀಲತೆಯ ಮುಖೇನ ಹೊಸಜ್ಞಾನ ರೂಪುಗೊಳ್ಳಬೇಕು. ಜ್ಞಾನಸೃಷ್ಟಿ ಹಾಗೂ ಜ್ಞಾನ ಪರಿಷ್ಕರಣೆಗಾಗಿ ಪ್ರಜ್ಞೆ ಮತ್ತು ಪರಿಸರವನ್ನು ಪೋಷಿಸಬೇಕಲ್ಲದೆ ಅಮಾನವೀಯವಾದ ಕಂಪ್ಯೂಟರನ್ನಲ್ಲ. ಮಾರುಕಟ್ಟೆಯ ಬೇಡಿಕೆ, ಪೂರೈಕೆ, ಧನಸಂಗ್ರಹವೇ ಪ್ರಧಾನವಾಗಿರುವ ಸಂಸ್ಕೃತಿ ಶೂನ್ಯರಿಗೆ ಮಾತ್ರವೇ ಕಂಪ್ಯೂಟರ್ ಮಂತ್ರದಂಡ. ಅದನ್ನು ಸಾರ್ವತ್ರಿಕಗೊಳಿಸಿ ಸಂಸ್ಕೃತಿಹೀನ ಸಮಾಜವನ್ನು ಸೃಷ್ಟಿಮಾಡುವುದು ಖಂಡನೀಯ.

ಕಳೆದ ೫೦ ವರ್ಷಗಳಲ್ಲಿ ಪ್ರಾಥಮಿಕ ಶಿಕ್ಷಣವನ್ನು ಕಡೆಗಣಿಸಲಾಗಿದೆ. ಉನ್ನತ ಶಿಕ್ಷಣವನ್ನು ಅತಿಮುದ್ದಿನಿಂದ ಪೋಷಿಸಲಾಗಿದೆ. ಆದುದರಿಂದ ಪ್ರಾಥಮಿಕ ಶಿಕ್ಷಣಕ್ಕೆ ಈಗ ಅಧಿಕ ಪ್ರಾಶಸ್ತ್ಯ ನೀಡಬೇಕು. ಹೆಚ್ಚಿನ ಹಣಕಾಸನ್ನು ಈ ರಂಗ ಒದಗಿಸಲಿಕ್ಕಾಗಿ ಉನ್ನತ ಶಿಕ್ಷಣಕ್ಕೆ ಅನುದಾನ ಕಡಿತ ಮಾಡಲೇ ಬೇಕಾಗಿದೆ ಎಂಬ ವಾದ ಸರಕಾರದ್ದು. ಪ್ರಾಥಮಿಕ ಶಿಕ್ಷಣವನ್ನು ಕಡೆಗಣಿಸಿದ್ದು ನಿಜ. ಆದರೆ ಹಾಗೆ ಮಾಡಿದವರು ಯಾರು? ಯಾರು ಹಾಗೆ ಮಾಡಿದರು? ಪ್ರಾಥಮಿಕ ಶಿಕ್ಷಣ ತನ್ನ ದುಃಸ್ಥಿತಿಯಿಂದ ಮೇಲೆದ್ದು ಬರಬೇಕು ನಿಜ. ಅದಕ್ಕಾಗಿ ಉನ್ನತ ಶಿಕ್ಷಣಕ್ಕೆ ಶಿಕ್ಷೆಯೇ? ಒಂದು ಕ್ಷೇತ್ರದಲ್ಲಿ ಬೆಳವಳಿಗೆಯಾಗಿಲ್ಲ ಎಂಬ ಕಾರಣಕ್ಕೆ ಇನ್ನೊಂದು ಕ್ಷೇತ್ರದ ಬೆಳವಣಿಗೆಯನ್ನು ಸ್ಥಗಿತಗೊಳಿಸುವುದು ಯಾವ ನ್ಯಾಯ? ಪ್ರಾಥಮಿಕ ಶಿಕ್ಷಣದ ಏಳಿಗೆಗಾಗಿ ಉನ್ನತ ಶಿಕ್ಷಣವನ್ನು ಮೂಲೆಗುಂಪು ಮಾಡುವುದೇಕೆ? ಒಟ್ಟು ಯುವ ಜನಾಂಗದಲ್ಲಿ ಶೇಕಡಾ ೮೮ ಮಂದಿ ಪದವಿ ವ್ಯಾಸಂಗವನ್ನು ಆಯ್ದುಕೊಳ್ಳುತ್ತಾರೆ. ಹೀಗಿರುವಾಗ ಉನ್ನತ ಶಿಕ್ಷಣವನ್ನು ಕಡೆಗಣಿಸುವುದು ತರವಲ್ಲ. ಉನ್ನತ ಶಿಕ್ಷಣ ಅಥವಾ ಪದವಿ ಶಿಕ್ಷಣವೆಂದರೆ ಕೇವಲ ಕಂಪ್ಯೂಟರ್ ಶಿಕ್ಷಣವಲ್ಲ. ಮನಸ್ಸನ್ನು ಅರಳಿಸುವ ಕಲೆ, ಸಾಹಿತ್ಯ, ಮಾನವಿಕಗಳು ಮೊದಲಾದ ಹಲವು ವಿಷಯಗಳಿವೆ.

ಒಟ್ಟು ರಾಷ್ಟ್ರೀಯ ವರಮಾನವನ್ನು ಶೇಕಡಾ ೩ರಷ್ಟು ಮೊತ್ತವನ್ನು ಮಾತ್ರ ಭಾರತೀಯ ಶಿಕ್ಷಣಕ್ಕಾಗಿ ವ್ಯಯಿಸುತ್ತಿದೆ. ಅಭಿವೃದ್ಧಿ ಶೀಲ ಹಾಗೂ ಹಲವು ಚಿಕ್ಕಪುಟ್ಟ ರಾಷ್ಟ್ರಗಳು ಶೇಕಡಾ ೧೫–೨೦ರಷ್ಟು ರಾಷ್ಟ್ರೀಯ ವರಮಾನವನ್ನು ಶಿಕ್ಷಣಕ್ಕಾಗಿ ವ್ಯಯಿಸುತ್ತಿದೆ. ಆದುದರಿಂದ ಭಾರತವು ಈ ರಂಗದಲ್ಲಿ ಗಣನೀಯ ಸುಧಾರಣೆಗೆ ಪ್ರಯತ್ನಿಸಲೇಬೇಕಾಗಿದೆ. ಈ ದೇಶದಲ್ಲಿ ಸ್ವಾತಂತ್ರ್ಯಪೂರ್ವದಿಂದಲೂ ಎಂಥಹ ಶಿಕ್ಷಣ ವ್ಯವಸ್ಥೆ ಇರಬೇಕು ಎಂಬ ಬಗ್ಗೆ ವ್ಯಾಪಕ ಚರ್ಚೆಗಳು ನಡೆಯುತ್ತಲೇ ಬಂದಿವೆ. ನಾವು ಕೇವಲ ಶಿಕ್ಷಕರ ಹೊಟ್ಟೆ ತುಂಬಿಸುವ ಬಗ್ಗೆ ಮಾತ್ರ ಚಿಂತನ ನಡೆಸಿಲ್ಲ ಎಂಬುದನ್ನು ಆಡಳಿತ ನಡೆಸುವ ಗಣ್ಯರು ತಿಳಿದಿರಲಿ.

ಯಾವುದೇ ಶಿಕ್ಷಣ ವ್ಯವಸ್ಥೆಯ ಆಧಾರ ಸ್ತಂಭವೆಂದರೆ ಶಿಕ್ಷಕರು. ಅವರ ಗೋರಿಯ ಮೇಲೆ ಯಾವ ಶಿಕ್ಷಣ ಸೌಧವನ್ನು ಕಟ್ಟಲು ಸಾಧ್ಯವಿಲ್ಲ. ಆದುದರಿಂದ ಸರಕಾರಗಳು ಶಿಕ್ಷಕರ ವೇತನಾನುಸಾರಕ್ಕೆ ಕತ್ತರಿ ಹಾಕದಿರಲಿ. ಇನ್ನೂ ಉತ್ತಮ ಸೇವೆಯನ್ನು ಪಡೆಯಲು ಏನು ಬೇಕೋ ಅದನ್ನು ಮಾಡಲಿ. ಹಾದಿ ತಪ್ಪುವವರನ್ನು ನಿರ್ದಾಕ್ಷಿಣ್ಯವಾಗಿ ಶಿಕ್ಷಿಸಲಿ. ಆಡಳಿತ ಮಂಡಳಿಗಳೇ ಶಿಕ್ಷಕರ ವೇತನ ನೀಡುತ್ತದೆ ಎಂದಾದಲ್ಲಿ ಸರಕಾರ ತೀರ ಬಿಗಿಯಾದ ನಿರ್ಬಂಧಗಳನ್ನು ಒಡ್ಡಿ ಶಿಕ್ಷಕರಿಗೆ ನ್ಯಾಯ ದೊರಕುವ ಹಾಗೆ ನೋಡಿಕೊಳ್ಳಲಿ. ಈ ಬಗೆಯ ಪ್ರಯತ್ನಗಳನ್ನು ಮಾಡುತ್ತೇವೆ ಎಂದು ಸರಕಾರ ಹೇಳುತ್ತಿದೆ. ಆದರೆ ಈವರೆಗೂ ಆಶ್ವಾಸನೆಗಳು ಸಾಕಾರಗೊಂಡಿಲ್ಲ.

ಶಿಕ್ಷಣದ ಅಂತರಾಷ್ಟ್ರೀಯ ಕ್ರಿಯೆ ಗ್ಯಾಟ್ ಹಾಗೂ ಡಬ್ಲ್ಯೂಟಿಒ ಒಪ್ಪಂದದ ಮೇರೆಗೆ ಆರಂಭವಾಗಿ ಬಿಟ್ಟಿದೆ. ಇದರಿಂದಾಗಿ ಶಿಕ್ಷಣ ಈ ಹೊತ್ತು ಒಂದು ರಾಜ್ಯದ ಒಂದು ವಿಶ್ವವಿದ್ಯಾಲಯದ, ಒಂದು ದೇಶದ ಗಡಿಗೆ ಸೀಮಿತವಾಗಬೇಕಿಲ್ಲ. 'ಎಲ್ಲೆಕಟ್ಟನೆಲ್ಲ ಮೆಟ್ಟಿ' ಉನ್ನತ ಶಿಕ್ಷಣ ಈಗ 'ಸೀಮಾತೀತ'ವಾಗುತ್ತಿದೆ. ಸ್ವದೇಶದಲ್ಲಿ ಅಷ್ಟೇನೂ ಮಾನ್ಯತೆಯಿಲ್ಲದ, ಗಿರಾಕಿಗಳಿಲ್ಲದ ವಿದೇಶೀ ವಿಶ್ವವಿದ್ಯಾಲಯಗಳು ನಮ್ಮ ದೇಶಕ್ಕೆ ನುಗ್ಗಿ ಇಲ್ಲಿ 'ಪಾಠದಂಗಡಿ'ಗಳನ್ನು ತೆರೆದು ಧಾರಾಳವಾಗಿ ಹಣ ದೋಚುವುದಕ್ಕೆ ಈ ಉಪಕ್ರಮ ತಕ್ಕ ವ್ಯವಸ್ಥೆ ಮಾಡಿದೆ. ವಿದೇಶಿ ಪದವಿಗಳ 'ಗಿರಹಿಡಿದ' ಮಂದಿ ದುಬಾರಿ ಶುಲ್ಕ ತೆತ್ತು ವ್ಯಾಸಂಗ ಮಾಡಿ ವಿದೇಶಗಳಿಗೆ ಹಾರಿಹೋಗುವ ಕನಸು ಕಾಣಲಡ್ಡಿಯಿಲ್ಲ. ಶಿಕ್ಷಣದ ಅಂತರಾಷ್ಟ್ರೀಕರಣದ ಈ ನೀತಿ ಸ್ಥಳೀಯ ಸಾಂಸ್ಕೃತಿಕ ಪ್ರಾದೇಶಿಕ ವಿಶಿಷ್ಟತೆಗಳೆಲ್ಲ ನುಗ್ಗುನುರಿಯಾದ 'ವಾಸನೆ ಬಣ್ಣರಹಿತವಾದ', ಏಕರೂಪದ ವ್ಯವಸ್ಥೆಯೊಂದನ್ನು ಅಭಿವೃದ್ಧಿಶೀಲ ರಾಷ್ಟ್ರಗಳ ಮೇಲೆ ಹೇರುವ ಹುನ್ನಾರವೆನ್ನದೆ ಬೇರೆ ವಿಧಿಯಿಲ್ಲ. ಮುಂದುವರಿದ ಅದರಲ್ಲೂ ಮುಖ್ಯವಾಗಿ 'ದೊಡ್ಡಣ್ಣ ಅಮೇರಿಕ'ದ ತಾಳಕ್ಕೆ ತಕ್ಕಂತೆ ಕುಣಿಯುವ ಸಲುವಾಗಿಯೇ ಕ್ರೆಡಿಟ್ ವ್ಯವಸ್ಥೆ ಸೆಮಿಸ್ಟರ್, ಸ್ವಾಯತ್ತೆ, ಸ್ವಧನ ಸಹಾಯ ಕಾಲೇಜುಗಳು, ಖಾಸಗಿ ವಿಶ್ವವಿದ್ಯಾಲಯ ಹಾಗೂ ನ್ಯಾಕ್ ಮಾನ್ಯತೆ ಎಂಬಿತ್ಯಾದಿ ಕ್ರಮಗಳನ್ನು ನಮ್ಮ ಸರಕಾರಗಳು ತರಾತುರಿಯಿಂದ ಜಾರಿಗೆ ತರುತ್ತಿದೆ. ವಿದೇಶೀ ವಿಶ್ವವಿದ್ಯಾಲಯಗಳ ದೆಸೆಯಿಂದಾಗಿ ನಿಂತ ನೆಲದ ಬಗ್ಗೆ ಗೌರವವಿಲ್ಲದ, ಮಣ್ಣಿನ ವಾಸನೆಯ ಅರಿವಿಲ್ಲದ ಅಂತರಾಷ್ಟ್ರೀಯ ಪ್ರಜೆ'ಗಳು ನಿರ್ಮಾಣವಾಗಿ ರಾಷ್ಟ್ರೀಯ ಗುರಿಗಳಿಗೇ ಮಾರಕವಾಗುವ ಸಾಧ್ಯತೆಗಳಿಲ್ಲದಿಲ್ಲ.

೧೯೪೭ರಲ್ಲಿ ಅಲಹಾಬಾದ್ ವಿಶ್ವವಿದ್ಯಾಲಯದ ಘಟಿಕೋತ್ಸವ ಭಾಷಣ ಮಾಡುತ್ತಾ ಪಂಡಿತ್ ನೆಹರುರವರು ಆಡಿದ ಮಾತುಗಳನ್ನು ನಮ್ಮ ನೀತಿ ನಿರೂಪಕರು ಮತ್ತೊಮ್ಮೆ ಮನನ ಮಾಡುವುದು ಅವಶ್ಯ. "ಒಂದು ವಿಶ್ವವಿದ್ಯಾಲಯವು ಮಾನವತೆಯ ಪ್ರಸ್ತುತತೆಯ, ವಿವೇಕದ ಪ್ರತೀಕ, ಅದು ವಿಚಾರಗಳ ಶೋಧನೆಯ ಸಾಹಸ ಮತ್ತು ನಿಜವಾದ ಸತ್ಯಶೋಧನೆಯ ಪ್ರತೀಕ" (ಮಹಾಬಲೇಶ್ವರ, ೨೦೦೭).

*****

## ಉಲ್ಲೇಖಗಳು


೧. ಪವರ್ ಕೆ.ಬಿ. ಪಂಡ ಎಸ್.ಕೆ (1995) 'ಭಾರತದಲ್ಲಿ ಉನ್ನತ ಶಿಕ್ಷಣ'. ಎಸೋಸಿಯೇಶನ್ ಆಫ್ ಇಂಡಿಯನ್ ಯುನಿವರ್ಸಿಟಿ, ದೆಹಲಿ.

೨. ಜಯರಾಮ್ ಎನ್. (1987) 'ಉನ್ನತ ಶಿಕ್ಷಣ'. ಮಿತ್ತಲ್ ಪಬ್ಲಿಕೇಷನ್ಸ್, ಡೆಲ್ಲಿ.

೩. ಚೌಹಾನ್ ಸಿ.ಪಿ.ಎಸ್. (1990) 'ಭಾರತದಲ್ಲಿ ಉನ್ನತ ಶಿಕ್ಷಣ'. ಆಶೀಶ್ ಪಬ್ಲಿಷಿಂಗ್, ಡೆಲ್ಲಿ.

೪. ಹೆಗಡೆ ಆರ್.ಡಿ. (2008) 'ಭಾರತದಲ್ಲಿ ಶಿಕ್ಷಣ ಸವಾಲು ಸಾಧ್ಯತೆ'. ಚಿಂತನ ಪುಸ್ತಕ ಮಳಿಗೆ, ಬೆಂಗಳೂರು.

೫. ಮಹಾಬಲೇಶ್ವರ ರಾವ್ (2007) 'ಶಿಕ್ಷಣ ವರ್ತಮಾನ'. ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.

೬. ಮಾರ್ಟಿನ್ ಕೊರೋನಾಯ್ (2007) 'ಮಹಿಳಾ ಹೈಯರ್ ಎಜ್ಯುಕೇಶನ್ ಎಂಡ್ ಎಕೋನೊಮಿಕ್ ಡೆವಲಪ್‌ಮೆಂಟ್'. ಜರ್ನಲ್ ಆಫ್ ಎಜ್ಯುಕೇಶನಲ್ ಪ್ಲಾನಿಂಗ್ ಎಂಡ್ ಅಡ್ಮಿನಿಸ್ಟ್ರೇಶನ್ 21(3); 203-229.

# ಅಧ್ಯಾಯ – ೪

## ಮಾಹಿತಿ ವಿಶ್ಲೇಷಣೆ

೪.೧ ಕಾಲೇಜು ಸ್ಥಾಪನೆಯಾದ ವರ್ಷ

೪.೨ ನ್ಯಾಕ್ ಮಾನ್ಯತೆ

೪.೩ ಕೋರ್ಸ್‌ಗಳ ಸಂಖ್ಯೆ

೪.೪ ಚಟುವಟಿಕೆಗಳು

೪.೫ ಸೇವಾನುಭವ

೪.೬ ಬೋಧನಾ ವಿಧಾನ

೪.೭ ಕೆಲಸದ ತೃಪ್ತಿ

೪.೮ ದೊರಕಿದ ಭಡ್ತಿಗಳು

# ಅಧ್ಯಾಯ – ೪

# ಮಾಹಿತಿ ವಿಶ್ಲೇಷಣೆ

ನಮ್ಮ ಸಮೀಕ್ಷೆಯು ಕಾಲೇಜು ಶಿಕ್ಷಣದ ಅಭಿವೃದ್ಧಿ ಬಗ್ಗೆ ಉತ್ತಮ ನಿಷ್ಕರ್ಷ ಮಾಹಿತಿಯನ್ನು ನೀಡುತ್ತದೆ. ಎಲ್ಲಿ ಮಾಹಿತಿ ವರ್ಗಾವಣೆ ಮತ್ತು ಜ್ಞಾನ ಭಂಡಾರದ ವೃದ್ಧಿಯಾಗುವುದೋ ಅಲ್ಲಿ ಕಾಲೇಜುಗಳು ಅಗ್ರ ಭಾಗವಾಗಿ ನಿಂತು ಕಾರ್ಯನಿರ್ವಹಿಸುತ್ತದೆ. ಸಮೀಕ್ಷೆಯು ಹೊಸ ಹೊಸ ಸಂಸ್ಥೆಗಳು ಪ್ರಕೃತಿದತ್ತವಾದ ವಾತಾವರಣದಲ್ಲಿ ನಿರ್ವಾಹಕರು, ಯೋಜನಾಕಾರರು ಮತ್ತು ಸಂಘಟಕರ ಮೌಲ್ಯಯುತ ನಿರ್ಣಯ ಹಾಗೂ ಯೋಜನೆಗಳ ಬಗೆಗಿನ ವಿಧಾನವನ್ನು ಕೇಂದ್ರೀಕರಿಸುತ್ತದೆ.

ಮಾಹಿತಿಯನ್ನು ಪ್ರಶ್ನಾವಳಿ, ಸಂದರ್ಶನ ಮತ್ತು ಅವಲೋಕನದ ಮೂಲಕ ವಿಶ್ಲೇಷಣೆ ಮಾಡಲಾಗಿದೆ. ಅಧ್ಯಯನ ಕಾರ್ಯದಲ್ಲಿ ಆದರ್ಶ ನೇಮಕಾತಿ ನೀತಿಯ ಪ್ರಸ್ತುತ ಮಾದರಿಯನ್ನು ಅಳವಡಿಸಿಕೊಳ್ಳಲಾಗಿದೆ. ಅಧ್ಯಯನದಲ್ಲಿ ರೇಖಾಚಿತ್ರಗಳನ್ನು ಮತ್ತು ಕೋಷ್ಟಕಗಳನ್ನು ಅಳವಡಿಸಲಾಗಿದೆ. ಈ ಅಧ್ಯಯನದಲ್ಲಿ ೫ ನಗರ ಕಾಲೇಜುಗಳಿಂದ ಮತ್ತು ೫ ಗ್ರಾಮೀಣ ಕಾಲೇಜುಗಳಿಂದ ಮಾಹಿತಿಯನ್ನು ಪಡೆಯಲಾಗಿದೆ.

ಪ್ರಾಥಮಿಕ ಮೂಲದಿಂದ ಸಂಗ್ರಹಿಸಲಾದ ಅಂಕಿ–ಅಂಶಗಳ ವಿಶ್ಲೇಷಣೆಯನ್ನು ಕೆಳಗೆ ನಮೂದಿಸಲಾಗಿದೆ.

## ೪.೧ ಕಾಲೇಜು ಸ್ಥಾಪನೆ ಮತ್ತು ಬೋಧಕರು

ಕೆಳಗಿನ ಕೋಷ್ಟಕದಲ್ಲಿ ಕಾಲೇಜು ಸ್ಥಾಪನೆಯಾದ ವರ್ಷವನ್ನು ತಿಳಿಯಬಹುದು.

ಕೋಷ್ಟಕ ೪.೧ ರಲ್ಲಿ ಕಾಲಾನುಸಾರವಾಗಿ ಕಾಲೇಜಿನ ಸ್ಥಾಪನಾ ವರ್ಷಮತ್ತು ಒಟ್ಟು ಬೋಧಕ ಸಿಬ್ಬಂದಿಗಳಲ್ಲಿ ಮಹಿಳಾ ಬೋಧಕರ ಸಂಖ್ಯೆಯನ್ನು ತೋರಿಸಲಾಗಿದೆ. ೧೮೬೮ರಿಂದ ೨೦೧೦ರವರೆಗೆ ಸ್ಥಾಪನೆಯಾದ ಕಾಲೇಜುಗಳನ್ನು ಅಧ್ಯಯನದಲ್ಲಿ ತೆಗೆದುಕೊಳ್ಳಲಾಗಿದೆ.

**ಕೋಷ್ಟಕ ೪.೧. ಕಾಲೇಜು ಸ್ಥಾಪನೆ ಮತ್ತು ಬೋಧಕರು**

| ಕ್ರ. ಸಂ. | ಕಾಲೇಜುಗಳ ಹೆಸರು | ಸ್ಥಾಪನೆಯಾದ ವರ್ಷ | ಒಟ್ಟು ಬೋಧಕರ ಸಂಖ್ಯೆ | ಮಹಿಳಾ ಬೋಧಕರ ಸಂಖ್ಯೆ | ಮಹಿಳಾ ಬೋಧಕರು ಶೇಕಡಾ |
|---|---|---|---|---|---|
| 1. | ಸಂತ ಅಲೋಶಿಯಸ್ ಕಾಲೇಜು, ಮಂಗಳೂರು (ಸ್ವಾಯತ್ತ) | 1880 | 142 | 76 | 54 |
| 2. | ವಿಶ್ವವಿದ್ಯಾನಿಲಯ ಕಾಲೇಜು, ಮಂಗಳೂರು | 1868 | 52 | 31 | 60 |
| 3. | ಸಂತ ಆಗ್ನೆಸ್ ಕಾಲೇಜು, ಮಂಗಳೂರು (ಸ್ವಾಯತ್ತ) | 1920 | 88 | 73 | 83 |
| 4. | ಬದ್ರಿಯಾ ಪ್ರಥಮ ದರ್ಜೆ ಕಾಲೇಜು, ಮಂಗಳೂರು | 1987 | 18 | 10 | 56 |
| 5. | ಶ್ರೀ ಗೋಕರ್ಣನಾಥೇಶ್ವರ ಪ್ರಥಮ ದರ್ಜೆ ಕಾಲೇಜು, ಮಂಗಳೂರು | 1992 | 20 | 10 | 50 |
| 6. | ಟಿಪ್ಪುಸುಲ್ತಾನ್ ಕಾಲೇಜು, ಉಳ್ಳಾಲ | 1992 | 26 | 12 | 47 |
| 7. | ವಿಟ್ಲ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ವಿಟ್ಲ | 1993 | 16 | 02 | 13 |
| 8. | ಪಿ.ಎ. ಕಾಲೇಜು, ಕಂಬಳಪದವು | 2001 | 25 | 19 | 76 |
| 9. | ಹೀರಾ ಮಹಿಳಾ ಕಾಲೇಜು, ತೊಕ್ಕೊಟ್ಟು | 2005 | 22 | 22 | 100 |
| 10. | ಕಣಚೂರು ಕಾಲೇಜು, ದೇರಳಕಟ್ಟೆ | 2008 | 08 | 04 | 50 |

ದಕ್ಷಿಣಕನ್ನಡ ಜಿಲ್ಲೆಯ ಕೆಲವು ಪುರಾತನ ಮತ್ತು ಕೆಲವು ಆಧುನಿಕ ಕಾಲೇಜನ್ನು ಇಲ್ಲಿ ತೋರಿಸಲಾಗಿದೆ. ಕೋಷ್ಟಕದಲ್ಲಿ ಒಟ್ಟು ಬೋಧಕ ಸಿಬ್ಬಂದಿಗಳಲ್ಲಿ ಮಹಿಳಾ ಬೋಧಕ ಸಿಬ್ಬಂದಿಗಳನ್ನು ತೋರಿಸಲಾಗಿದ್ದು, ಸಂತ ಅಲೋಶಿಯಸ್ ಕಾಲೇಜಿನಲ್ಲಿ ಅತ್ಯಂತ ಹೆಚ್ಚು ಅಂದರೆ ೭೬ ಮಂದಿ ಮಹಿಳಾ

ಬೋಧಕರಿದ್ದಾರೆ. ಇಲ್ಲಿ ೧೯೮೭ರಿಂದ ಹುಡುಗಿಯರಿಗೆ ಪ್ರವೇಶ ನೀಡಲಾರಂಭಿಸಿತು. ಅಲ್ಲಿಯವರೆಗೆ ಇಬ್ಬರು ಮಹಿಳಾ ಅಧ್ಯಾಪಿಕೆಯರಿದ್ದರು. ಈಗ ೭೬ ಮಂದಿ ಮಹಿಳಾ ಅಧ್ಯಾಪಿಕೆಯರಿದ್ದಾರೆ. ಅದೇ ರೀತಿಯಾಗಿ ವಿಟ್ಲ ಪ್ರಥಮ ದರ್ಜೆ ಕಾಲೇಜಿನಲ್ಲಿ ಅತ್ಯಂತ ಕಡಿಮೆ ಅಂದರೆ ೨ ಮಂದಿ ಮಾತ್ರ ಮಹಿಳಾ ಬೋಧಕರಿದ್ದಾರೆ. ೪ ಗ್ರಾಮೀಣ ಕಾಲೇಜುಗಳಲ್ಲಿ ಅತ್ಯಂತ ಕಡಿಮೆ ಮಹಿಳಾ ಬೋಧಕರನ್ನು ಒಳಗೊಂಡಿದೆ. ಆದರೆ ಗ್ರಾಮೀಣ ಕಾಲೇಜಾದ ಹೀರಾ ಕಾಲೇಜಿನಲ್ಲಿ ೧೦೦% ಮಹಿಳಾ ಬೋಧಕರೇ ಇದ್ದಾರೆ.

## ೪.೨ ನ್ಯಾಕ್ ಮಾನ್ಯತೆ

ನ್ಯಾಷನಲ್ ಅಸೆಸ್‌ಮೆಂಟ್ ಅಂಡ್ ಎಕ್ರೆಡಿಟೇಶನ್ ಕೌನ್ಸಿಲ್ (ನ್ಯಾಕ್) ಸ್ವಾಯತ್ತ ಸಂಸ್ಥೆಯಾಗಿದ್ದು, ಸೆಕ್ಷನ್ ೧೨-CCC ಯ ಯು.ಜಿ.ಸಿ. ಆ್ಯಕ್ಟ್ ೧೯೫೬ರ ಪ್ರಕಾರ ಯು.ಜಿ.ಸಿ.ಯಿಂದ ಸ್ಥಾಪಿತವಾಗಿದೆ. ಉನ್ನತ ಶಿಕ್ಷಣದ ದರ್ಜೆ ಮತ್ತು ಅದರ ಗುಣಮಟ್ಟದ ವಿಶ್ವಾಸವನ್ನು ಕಾಪಾಡುವುದೇ ಇದರ ಪ್ರಾಥಮಿಕ ಉದ್ದೇಶವಾಗಿದೆ.

ಕೆಳಗಿನ ಕೋಷ್ಟಕದಲ್ಲಿ ನ್ಯಾಕ್ ಮಾನ್ಯತೆಯನ್ನು ಪಡೆದಿರುವ ಕಾಲೇಜುಗಳನ್ನು ತೋರಿಸಲಾಗಿದೆ.

**ಕೋಷ್ಟಕ ೪.೨. ನ್ಯಾಕ್ ಮಾನ್ಯತೆಯನ್ನು ಹೊಂದಿರುವ ಕಾಲೇಜುಗಳು**

| ಕ್ರ. ಸಂ. | ನ್ಯಾಕ್ ಮಾನ್ಯತೆ (ದರ್ಜೆ) | ನ್ಯಾಕ್ ಮಾನ್ಯತೆ ದೊರಕಿದ ಕಾಲೇಜುಗಳ ಸಂಖ್ಯೆ | ನ್ಯಾಕ್ ಮಾನ್ಯತೆ ದೊರಕಿದ ಕಾಲೇಜುಗಳ ಶೇಕಡಾ ಅಂಶ |
|---|---|---|---|
| 1. | A++ | 0 | 0 |
| 2. | A+ | 0 | 0 |
| 3. | A | 2 | 20 |
| 4. | B++ | 1 | 10 |
| 5. | B+ | 1 | 10 |
| 6. | B | 1 | 10 |
| 7. | C++ | 0 | 0 |
| 8. | C+ | 0 | 0 |
| 9. | C | 0 | 0 |




**ನಕ್ಷೆ ೪.೧. ನ್ಯಾಕ್ ಮಾನ್ಯತೆ**

ಈ ಮೇಲಿನ ನಕ್ಷೆಯಲ್ಲಿ ೨ ಕಾಲೇಜುಗಳು A ಗ್ರೇಡನ್ನು ಹೊಂದಿದ್ದು, ೧ ಕಾಲೇಜು B++ ಗ್ರೇಡನ್ನು, ೧ ಕಾಲೇಜು B+ ಗ್ರೇಡನ್ನು ಮತ್ತು ೧ ಕಾಲೇಜು B ಗ್ರೇಡನ್ನು ಹೊಂದಿದೆ. ನಗರ ಕಾಲೇಜಾದ ಬದ್ರಿಯಾ ಕಾಲೇಜು ಇನ್ನೂ ನ್ಯಾಕ್ ಮಾನ್ಯತೆಯನ್ನು ಹೊಂದಲಿಲ್ಲ. ಗ್ರಾಮೀಣ ಕಾಲೇಜಾದ ವಿಟ್ಲವು ನ್ಯಾಕ್ ಮಾನ್ಯತೆಯನ್ನು ಹೊಂದಿದೆ ಹಾಗೂ ಉಳಿದ ಗ್ರಾಮೀಣ ಕಾಲೇಜುಗಳು ನ್ಯಾಕ್ ಮಾನ್ಯತೆಯನ್ನು ಹೊಂದಲಿಲ್ಲ.

## ೪.೩ ಕೋರ್ಸುಗಳ ಸಂಖ್ಯೆ

ಕೋಷ್ಟಕ ೪.೩ರಲ್ಲಿ ಕಾಲೇಜಿನಲ್ಲಿರುವ ಕೋರ್ಸುಗಳ ಸಂಖ್ಯೆಯನ್ನು ತೋರಿಸಲಾಗಿದೆ. ಒಟ್ಟು ೧೦ ಕಾಲೇಜುಗಳಲ್ಲಿ ಸಂತ ಅಲೋಶಿಯಸ್ ಮತ್ತು ಸಂತ ಆಗ್ನೆಸ್ ಕಾಲೇಜುಗಳಲ್ಲಿ ಎಲ್ಲಾ ಕೋರ್ಸುಗಳೂ ಲಭ್ಯವಿದೆ. ಸಿಕ್ಕಿರುವ ಮಾಹಿತಿಯ ಪ್ರಕಾರ ಉಳಿದ ನಗರ ಕಾಲೇಜುಗಳಲ್ಲಿ ೭೦%ದಷ್ಟು ಕೋರ್ಸುಗಳು ಲಭ್ಯವಿದ್ದು ಗ್ರಾಮೀಣ ಕಾಲೇಜುಗಳಲ್ಲಿ ೬೦%ದಷ್ಟು ಕೋರ್ಸುಗಳನ್ನು ಹೊಂದಿದೆ ಎಂಬುದನ್ನು ತೋರಿಸುತ್ತದೆ. ಸಮೀಕ್ಷೆಯಲ್ಲಿ ೧೦ ಕಾಲೇಜುಗಳನ್ನು ತೆಗೆದುಕೊಂಡಿದ್ದು ೯ ಕಾಲೇಜುಗಳಲ್ಲಿ ಮಾತ್ರ ಕಲಾವಿಭಾಗಗಳನ್ನು ಹೊಂದಿದೆ. ಬಿ.ಕಾಂ. ಮತ್ತು ಬಿ.ಬಿ.ಎಂ. ಕೋರ್ಸುಗಳು ಹತ್ತು ಕಾಲೇಜುಗಳಲ್ಲೂ ಲಭ್ಯವಿದೆ. ೬ ಕಾಲೇಜುಗಳಲ್ಲಿ ಕಂಪ್ಯೂಟರ್ ಶಿಕ್ಷಣವಿದ್ದು ೬೦%ದಷ್ಟು ಗ್ರಾಮೀಣ ಪ್ರದೇಶದಲ್ಲಿಯೂ ಕಂಪ್ಯೂಟರ್ ಕೋರ್ಸು ಲಭ್ಯವಿದೆ. ೩ ಕಾಲೇಜುಗಳಲ್ಲಿ ವಿಜ್ಞಾನ ವಿಭಾಗಗಳಿವೆ. ಎರಡು ಕಾಲೇಜುಗಳಲ್ಲಿ ಬಿ.ಎಸ್.ಡಬ್ಲ್ಯೂ. ಕೋರ್ಸುಗಳು ಲಭ್ಯವಿದೆ. ಸಂತ ಅಲೋಶಿಯಸ್ ಮತ್ತು ಸಂತ ಆಗ್ನೆಸ್ ಕಾಲೇಜುಗಳಲ್ಲಿ ಎಲ್ಲಾ ಕೋರ್ಸುಗಳು ಲಭ್ಯವಿದೆ. ಆದರೆ ಗ್ರಾಮೀಣ ಕಾಲೇಜುಗಳಲ್ಲಿ ಕೆಲವು ಕೋರ್ಸುಗಳು ಮಾತ್ರ ಲಭ್ಯವಿದೆ. ಹಾಗಾಗಿ ನಗರ

ಮತ್ತು ಗ್ರಾಮೀಣ ಕಾಲೇಜುಗಳಿಗೆ ಹೋಲಿಸಿದಾಗ ಗ್ರಾಮೀಣ ಕಾಲೇಜುಗಳಲ್ಲಿ ಕೋರ್ಸ್‌ಗಳ ವಿಸ್ತರಣೆಯ ಅಗತ್ಯವಿದೆ.

**ಕೋಷ್ಟಕ ೪.೩. ಕೋರ್ಸ್‌ಗಳ ಸಂಖ್ಯೆ**

| ಕ್ರ. ಸಂ. | ಕಾಲೇಜುಗಳ ಹೆಸರು | ಬಿ.ಎ. | ಬಿ.ಕಾಂ. | ಬಿ.ಬಿ.ಎಂ. | ಬಿ.ಸಿ.ಎ. | ಬಿ.ಎಸ್ಸಿ. | ಬಿ.ಎಸ್. ಡಬ್ಲ್ಯೂ. |
|---|---|---|---|---|---|---|---|
| 1. | ಸಂತ ಅಲೋಶಿಯಸ್ ಕಾಲೇಜು, ಮಂಗಳೂರು | ಇದೆ | ಇದೆ | ಇದೆ | ಇದೆ | ಇದೆ | ಇದೆ |
| 2. | ವಿಶ್ವವಿದ್ಯಾನಿಲಯ ಕಾಲೇಜು, ಮಂಗಳೂರು | ಇದೆ | ಇದೆ | ಇದೆ | ಇದೆ | ಇದೆ | ಇಲ್ಲ |
| 3. | ಸಂತ ಆಗ್ನೆಸ್ ಕಾಲೇಜು, ಮಂಗಳೂರು | ಇದೆ | ಇದೆ | ಇದೆ | ಇದೆ | ಇದೆ | ಇದೆ |
| 4. | ಬದ್ರಿಯಾ ಪ್ರಥಮ ದರ್ಜೆ ಕಾಲೇಜು, ಮಂಗಳೂರು | ಇದೆ | ಇದೆ | ಇದೆ | ಇಲ್ಲ | ಇಲ್ಲ | ಇಲ್ಲ |
| 5. | ಶ್ರೀ ಗೋಕರ್ಣನಾಥೇಶ್ವರ ಪ್ರಥಮ ದರ್ಜೆ ಕಾಲೇಜು, ಮಂಗಳೂರು | ಇದೆ | ಇದೆ | ಇದೆ | ಇಲ್ಲ | ಇಲ್ಲ | ಇಲ್ಲ |
| 6. | ಟಿಪ್ಪುಸುಲ್ತಾನ್ ಕಾಲೇಜು, ಉಳ್ಳಾಲ | ಇದೆ | ಇದೆ | ಇದೆ | ಇದೆ | ಇಲ್ಲ | ಇಲ್ಲ |
| 7. | ವಿಟ್ಲ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ವಿಟ್ಲ | ಇದೆ | ಇದೆ | ಇದೆ | ಇಲ್ಲ | ಇಲ್ಲ | ಇಲ್ಲ |
| 8. | ಪಿ.ಎ. ಕಾಲೇಜು, ಕಂಬಳಪದವು | ಇಲ್ಲ | ಇದೆ | ಇದೆ | ಇದೆ | ಇಲ್ಲ | ಇಲ್ಲ |
| 9. | ಹೀರಾ ಮಹಿಳಾ ಕಾಲೇಜು, ತೊಕ್ಕೊಟ್ಟು | ಇದೆ | ಇದೆ | ಇದೆ | ಇಲ್ಲ | ಇಲ್ಲ | ಇಲ್ಲ |
| 10. | ಕಣಚೂರು ಕಾಲೇಜು, ದೇರಳಕಟ್ಟೆ | ಇದೆ | ಇದೆ | ಇದೆ | ಇದೆ | ಇಲ್ಲ | ಇಲ್ಲ |

## ೪.೪ ಚಟುವಟಿಕೆಗಳು

ಎಲ್ಲಾ ಕಾಲೇಜುಗಳಲ್ಲಿಯೂ ವಿವಿಧ ರೀತಿಯ ಚಟುವಟಿಕೆಗಳನ್ನು ನಡೆಸಲಾಗುತ್ತದೆ. ಕ್ರೀಡೆಗಳು, ಸಾಂಸ್ಕೃತಿಕ ಕಾರ್ಯಕ್ರಮಗಳು, ರಾಜ್ಯಮಟ್ಟದ ಸ್ಪರ್ಧೆಗಳು, ಜಿಲ್ಲಾ ಮಟ್ಟದ ಸ್ಪರ್ಧೆಗಳು ಹೀಗೆ ವಿವಿಧ ರೀತಿಯ ಚಟುವಟಿಕೆ ಸ್ಪರ್ಧೆಗಳನ್ನು ನಡೆಸಲಾಗುತ್ತಿದೆ. ಇತ್ತೀಚಿನ ದಿನಗಳಲ್ಲಿ ನಗರ ಕಾಲೇಜುಗಳಂತೆ ಗ್ರಾಮೀಣ ಕಾಲೇಜುಗಳಲ್ಲಿಯೂ ಸಹ ವಿದ್ಯಾರ್ಥಿಗಳು ತಮ್ಮ ತಮ್ಮ ಪ್ರತಿಭೆಗಳನ್ನು ತೋರ್ಪಡಿಸುವಲ್ಲಿ ಯಶಸ್ವಿಯಾಗಿದ್ದಾರೆ. ಹೆಚ್ಚಿನ ಗ್ರಾಮೀಣ ಕಾಲೇಜುಗಳ ವಿದ್ಯಾರ್ಥಿಗಳು ವಿವಿಧ ರೀತಿಯ ಸ್ಪರ್ಧೆಗಳಲ್ಲಿ ಭಾಗವಹಿಸಿ ತಮ್ಮ ಕಾಲೇಜಿಗೆ ಉತ್ತಮ ಫಲಿತಾಂಶಗಳನ್ನು ತಂದುಕೊಡುತ್ತಾರೆ. ಹಾಗಾಗಿ ಗ್ರಾಮೀಣ ಮತ್ತು ನಗರ ಕಾಲೇಜುಗಳಲ್ಲಿ ಚಟುವಟಿಕೆಗಳು ಸಾಮಾನ್ಯವಾಗಿ ಒಂದೇ ರೀತಿಯಲ್ಲಿ ಸಾಗುತ್ತಿದೆ. ಕೆಳಗಿನ ಕೋಷ್ಟಕದಲ್ಲಿ ಕಾಲೇಜುಗಳಲ್ಲಿರುವ ಚಟುವಟಿಕೆಗಳನ್ನು ಕಾಣಬಹುದು.

**ಕೋಷ್ಟಕ ೪.೪. ಸಹಪಠ್ಯ ಚಟುವಟಿಕೆಗಳು**

| ಕ್ರ. ಸಂ. | ದೊರಕುವ ಚಟುವಟಿಕೆಗಳು | ಪ್ರತ್ಯುತ್ತರ | ಶೇಕಡಾ |
|---|---|---|---|
| 1. | ಕ್ರೀಡೆಗಳು | 10 | 100 |
| 2. | ಸಾಂಸ್ಕೃತಿಕ ಕಾರ್ಯಕ್ರಮಗಳು | 10 | 100 |
| 3. | ರಾಜ್ಯಮಟ್ಟದ ಸ್ಪರ್ಧೆಗಳು | 8 | 80 |
| 4. | ರಾಷ್ಟ್ರಮಟ್ಟದ ಸ್ಪರ್ಧೆಗಳು | 5 | 50 |
| 5. | ಅಂತರಾಷ್ಟ್ರೀಯ ಮಟ್ಟದ ಸ್ಪರ್ಧೆಗಳು | 1 | 10 |

ಈ ಮೇಲಿರುವ ಕೋಷ್ಟಕದಲ್ಲಿ ಎಲ್ಲಾ ೧೦ ಕಾಲೇಜಿನಲ್ಲಿಯೂ ಕ್ರೀಡೆಗಳು ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತದೆ. ೮ ಕಾಲೇಜುಗಳಲ್ಲಿ ಅಂದರೆ ಶೇಕಡಾ ೮೦ರಷ್ಟು ರಾಜ್ಯಮಟ್ಟದ ಸ್ಪರ್ಧೆಗಳನ್ನು ನಡೆಸಲಾಗುತ್ತದೆ. ೫ ಕಾಲೇಜುಗಳಲ್ಲಿ ರಾಷ್ಟ್ರಮಟ್ಟದ ಸ್ಪರ್ಧೆಗಳು ಮತ್ತು ೧ ಕಾಲೇಜಿನಲ್ಲಿ ಅಂತರಾಷ್ಟ್ರೀಯ ಮಟ್ಟದ ಸ್ಪರ್ಧೆಯನ್ನು ಏರ್ಪಡಿಸುತ್ತಾರೆ ಎಂಬುದು ಪ್ರಾಥಮಿಕ ಮಾಹಿತಿಯ ಮೂಲಕ ಸ್ಪಷ್ಟವಾಗುತ್ತದೆ. ಗ್ರಾಮೀಣ ಕಾಲೇಜುಗಳಲ್ಲಿ ರಾಷ್ಟ್ರಮಟ್ಟದ ಮತ್ತು ಅಂತರಾಷ್ಟ್ರೀಯ ಮಟ್ಟದ ಸ್ಪರ್ಧೆಗಳ

ಬಗ್ಗೆ ಹೆಚ್ಚು ಒತ್ತು ನೀಡುತ್ತಿಲ್ಲ ಎಂಬುದು ಸಮೀಕ್ಷೆಯಿಂದ ತಿಳಿದುಬರುತ್ತದೆ. ಇದನ್ನು ಕೆಳಗಿನ ನಕ್ಷೆಯಲ್ಲಿ ತಿಳಿಯಬಹುದು.




**ನಕ್ಷೆ ೪.೨. ಕಾಲೇಜಿನಲ್ಲಿರುವ ಚಟುವಟಿಕೆಗಳು**

## ೪.೫ ಸೇವಾನುಭವ

ಅನುಭವವು ಮನುಷ್ಯನನ್ನು ಸಮರ್ಥನನ್ನಾಗಿ ಮಾಡುತ್ತದೆ ಎಂದು ಹೇಳಿದ ಹಾಗೆ ಪ್ರತಿಯೊಂದು ಸಂಸ್ಥೆಯಲ್ಲಿಯೂ ಉತ್ತಮ ಮನೋಭಾವದ ಅನುಭವಸ್ಥ ಸಿಬ್ಬಂದಿಗಳಿದ್ದರೆ ಆ ಸಂಸ್ಥೆಯು ಉತ್ತಮ ಏಳಿಗೆಯನ್ನು ಕಾಣಬಹುದು. ಕೆಳಗಿನ ಕೋಷ್ಟಕವು ಸಂಸ್ಥೆಯಲ್ಲಿರುವ ಸಿಬ್ಬಂದಿಗಳ ಅನುಭವವನ್ನು ತೋರಿಸುತ್ತದೆ.

**ಕೋಷ್ಟಕ ೪.೫. ಸೇವಾನುಭವ**

| ಕ್ರ. ಸಂ. | ಸಿಬ್ಬಂದಿಯ ಹುದ್ದೆ | ಸಂಪರ್ಕಿಸಿದ ಸಿಬ್ಬಂದಿಗಳ ಸಂಖ್ಯೆ | ಸೇವಾನುಭವ ವರ್ಷಗಳು | | |
|---|---|---|---|---|---|
| | | | 1-5 ವರ್ಷಗಳು | 6-10 ವರ್ಷಗಳು | 10ರಿಂದ ಮೇಲ್ಪಟ್ಟು |
| 1. | ಪ್ರಾಂಶುಪಾಲರು | 6 | ಇಲ್ಲ | ಇಲ್ಲ | ಇಲ್ಲ |
| 2. | ಬೋಧಕರು | 22 | ಹೌದು | ಹೌದು | ಹೌದು |
| 3. | ಬೆರಳಚ್ಚುಗಾರರು | 7 | ಇಲ್ಲ | ಹೌದು | ಇಲ್ಲ |
| 4. | ಗುಮಾಸ್ತರು | 9 | ಇಲ್ಲ | ಹೌದು | ಹೌದು |
| 5. | ಪೇದೆಗಳು | 8 | ಇಲ್ಲ | ಹೌದು | ಹೌದು |
| 6. | ಕಾವಲುಗಾರ | 6 | ಹೌದು | ಇಲ್ಲ | ಹೌದು |

ಮೇಲಿನ ಕೋಷ್ಟಕದಲ್ಲಿ ಸಂಪರ್ಕವಾದ ೬ ಪ್ರಾಂಶುಪಾಲರಲ್ಲಿ ಎಲ್ಲರೂ ೧೦ಕ್ಕಿಂತ ಮೇಲ್ಪಟ್ಟು ಸೇವಾನುಭವ ಹೊಂದಿದವರಾಗಿರುತ್ತಾರೆ. ೨೨ ಮಂದಿ ಬೋಧಕರಲ್ಲಿ ಕೆಲವರು ೧ ರಿಂದ ೫ ವರ್ಷದವರೆಗಿನ ಇನ್ನು ಕೆಲವರು ೬ರಿಂದ ೧೦ ವರ್ಷದವರೆಗಿನ ಹಾಗೂ ೧೦ಕ್ಕಿಂತಲೂ ಮೇಲ್ಪಟ್ಟು ಸೇವೆ ಸಲ್ಲಿಸಿದರವನ್ನು ಕಾಣಬಹುದು. ಅದೇ ರೀತಿಯಾಗಿ ೭ ಬೆರಳಚ್ಚುಗಾರರು ೬ರಿಂದ ೧೦ ವರ್ಷಗಳವರೆಗಿನ ಸೇವಾನುಭವ ಹೊಂದಿದವರಾಗಿದ್ದಾರೆ. ಗುಮಾಸ್ತರು ಕೆಲವರು ೬ರಿಂದ ೧೦ ವರ್ಷಗಳವರೆಗೆ ಮತ್ತು ಕೆಲವರು ೧೦ರಿಂದ ಮೇಲ್ಪಟ್ಟು ಸೇವೆ ಸಲ್ಲಿಸಿದವರೂ ಇದ್ದಾರೆ. ಪೇದೆಗಳು ೬ರಿಂದ ಮೇಲ್ಪಟ್ಟು ಸೇವೆ ಸಲ್ಲಿಸಿದವರಾಗಿದ್ದಾರೆ. ಕಾವಲುಗಾರರಲ್ಲಿ ಕೆಲವರು ೧ರಿಂದ ೫ ವರ್ಷಗಳವರೆಗೆ ಸೇವೆ ಸಲ್ಲಿಸಿದವರು ಮತ್ತು ೧೦ಕ್ಕಿಂತ ಮೇಲ್ಪಟ್ಟು ಸೇವೆ ಸಲ್ಲಿಸಿದವರೂ ಇದ್ದಾರೆ.

ಅನುವಂಶಿಕ ಮೂಲದಿಂದ ಸಂಗ್ರಹಿಸಲಾದ ಅಂಕಿಅಂಶಗಳ ವಿಶ್ಲೇಷಣೆಯನ್ನು ಕೆಳಗೆ ನಮೂದಿಸಲಾಗಿದೆ.

## ೪.೬ ಬೋಧನಾ ವಿಧಾನ

ಎಲ್ಲಾ ಕಾಲೇಜುಗಳಲ್ಲಿಯೂ ಸೈದ್ಧಾಂತಿಕ ಮತ್ತು ಪ್ರಾಯೋಗಿಕ ಬೋಧನಾ ವಿಧಾನವನ್ನು ಬಳಸಲಾಗುತ್ತದೆ. ಇದಲ್ಲದೆ ವಿಚಾರ ಸಂಕಿರಣ, ಕಾರ್ಯಾಗಾರ, ಸಮಾವೇಶ, ಪ್ರಬಂಧರಚನೆ, ಗುಂಪುಚರ್ಚೆ, ಶೈಕ್ಷಣಿಕ ಪ್ರವಾಸ ಮುಂತಾದವುಗಳನ್ನು ಕೈಗೊಳ್ಳುತ್ತಾರೆ. ಗ್ರಾಮೀಣ ಕಾಲೇಜುಗಳಲ್ಲಿ ಹೆಚ್ಚಾಗಿ ಸೈದ್ಧಾಂತಿಕ ಮತ್ತು ಪ್ರಾಯೋಗಿಕ ವಿಧಾನವನ್ನೆ ಹೆಚ್ಚಾಗಿ ಬಳಸಲಾಗುತ್ತಿದೆ. ಆದರೆ ನಗರ ಕಾಲೇಜುಗಳಿಗೆ ಹೋಲಿಸಿದರೆ ಗ್ರಾಮೀಣ ಕಾಲೇಜುಗಳಲ್ಲಿ ವಿಚಾರ ಸಂಕಿರಣ, ಸಮಾವೇಶ, ಚರ್ಚಾಕೂಟಗಳು ಮುಂತಾದವುಗಳನ್ನು ನಡೆಸುವ ಸಂಖ್ಯೆಯು ಕಡಿಮೆ ಇದೆ. ಹಾಗಾಗಿ ಗ್ರಾಮೀಣ ಕಾಲೇಜುಗಳು ಇನ್ನೂ ಹೆಚ್ಚಿನ ಅಭಿವೃದ್ಧಿಯನ್ನು ಹೊಂದುವುದು ಅಗತ್ಯವಿದೆ. ಬೋಧನಾ ವಿಧಾನದ ದತ್ತಾಂಶ ಸಂಗ್ರಹಣೆಯನ್ನು ಈ ಕೆಳಗೆ ತೋರಿಸಲಾಗಿದೆ.

**ಕೋಷ್ಟಕ ೪.೬. ಬೋಧನಾ ವಿಧಾನ**

| ಕ್ರ. ಸಂ. | ಬೋಧನಾ ವಿಧಾನ | ಕಾಲೇಜು ಸಂಖ್ಯೆ | ಪ್ರತ್ಯುತ್ತರ | ಶೇಕಡಾ |
|---|---|---|---|---|
| 1. | ಸೈದ್ಧಾಂತಿಕ | 10 | 10 | 100 |
| 2. | ಪ್ರಾಯೋಗಿಕ | 10 | 9 | 90 |
| 3. | ವಿಚಾರ ಸಂಕಿರಣ | 10 | 9 | 90 |
| 4. | ನೇಮಿತ ಯೋಜನೆ | 10 | 10 | 100 |
| 5. | ಪ್ರಬಂಧ | 10 | 7 | 70 |
| 6. | ಗುಂಪು ಚರ್ಚೆ | 10 | 5 | 50 |
| 7. | ಶೈಕ್ಷಣಿಕ ಪ್ರವಾಸ | 10 | 6 | 60 |
| 8. | ಸಮಾವೇಶ | 10 | 4 | 40 |

ಮೇಲಿನ ಕೋಷ್ಟಕದಲ್ಲಿ ಎಲ್ಲಾ ೧೦ ಕಾಲೇಜುಗಳಲ್ಲಿಯೂ ಅಂದರೆ ೧೦೦%ದಷ್ಟು ಸೈದ್ಧಾಂತಿಕ ವಿಧಾನವನ್ನು ಬಳಸಲಾಗುತ್ತಿದೆ. ಸೈದ್ಧಾಂತಿಕ ಮತ್ತು ಪ್ರಾಯೋಗಿಕವಾಗಿ ೯೦% ಅಂದರೆ ೯ ಕಾಲೇಜುಗಳಲ್ಲಿ ಬಳಸಲಾಗುತ್ತಿದೆ. ಅದೇ ರೀತಿ ಸೈದ್ಧಾಂತಿಕ ಮತ್ತು ನೇಮಿತ ಯೋಜನೆ ೧೦೦%ದಷ್ಟು ಅಂದರೆ ೧೦

ಕಾಲೇಜುಗಳಲ್ಲಿಯೂ ಬಳಸಲಾಗುತ್ತಿದೆ. ಹಾಗೆಯೇ ವಿಚಾರ ಸಂಕಿರಣ ೯೦%, ಪ್ರಬಂಧ ೭೦%, ಗುಂಪುಚರ್ಚೆ ೫೦% ಶೈಕ್ಷಣಿಕ ಪ್ರವಾಸ ೬೦% ಮತ್ತು ಸಮಾವೇಶವನ್ನು ೪೦%ದಷ್ಟು ಕೇವಲ ೪ ಕಾಲೇಜುಗಳಲ್ಲಿ ಮಾತ್ರ ಬಳಸಲಾಗುತ್ತಿದೆ. ಇದನ್ನು ಈ ಕೆಳಗಿನ ನಕ್ಷೆಯ ಮೂಲಕ ತಿಳಿಯಬಹುದು.




**ನಕ್ಷೆ ೪.೩. ಬೋಧನಾ ವಿಧಾನ**

### ೪.೬.೧ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳ ಸಂಖ್ಯೆ

ಯಾವುದೇ ಒಂದು ಸಂಸ್ಥೆಯು ಉತ್ತಮ ವ್ಯವಹಾರಗಳನ್ನು ನಡೆಸಬೇಕಾದರೆ ಅದು ಅಲ್ಲಿಯ ಸಿಬ್ಬಂದಿಗಳ ಸಾಮರ್ಥ್ಯವನ್ನು ಅನುಸರಿಸಿಕೊಂಡಿರುತ್ತದೆ. ಕಾಲೇಜಿನ ಸಿಬ್ಬಂದಿಗಳಲ್ಲಿ ೨ ವಿಧಗಳಿವೆ.

ಬೋದಕ ಸಿಬ್ಬಂದಿ

ಬೋಧಕೇತರ ಸಿಬ್ಬಂದಿ

ಕಾಲೇಜಿನ ಒಟ್ಟು ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳನ್ನು ಕೋಷ್ಟಕದಲ್ಲಿ ತೋರಿಸಲಾಗಿದೆ.

### ಕೋಷ್ಟಕ ೪.೭. ಬೋಧಕ ಮತ್ತು ಬೋಧಕೇತರ ಸಿಬ್ಬಂದಿ

| ಕ್ರ. ಸಂ. | ಕಾಲೇಜುಗಳ ಹೆಸರು | ಬೋಧಕ ಸಿಬ್ಬಂದಿ | ಬೋಧಕೇತರ ಸಿಬ್ಬಂದಿ |
|---|---|---|---|
| 1. | ಸಂತ ಅಲೋಶಿಯಸ್ ಕಾಲೇಜು, ಮಂಗಳೂರು (ಸ್ವಾಯತ್ತ) | 142 | 82 |
| 2. | ವಿಶ್ವವಿದ್ಯಾನಿಲಯ ಕಾಲೇಜು, ಮಂಗಳೂರು | 52 | 21 |
| 3. | ಸಂತ ಆಗ್ನೆಸ್ ಕಾಲೇಜು, ಮಂಗಳೂರು (ಸ್ವಾಯತ್ತ) | 88 | 46 |
| 4. | ಬದ್ರಿಯಾ ಪ್ರಥಮ ದರ್ಜೆ ಕಾಲೇಜು, ಮಂಗಳೂರು | 18 | 10 |
| 5. | ಶ್ರೀ ಗೋಕರ್ಣನಾಥೇಶ್ವರ ಪ್ರಥಮ ದರ್ಜೆ ಕಾಲೇಜು, ಮಂಗಳೂರು | 20 | 13 |
| 6. | ಟಿಪ್ಪುಸುಲ್ತಾನ್ ಕಾಲೇಜು, ಉಳ್ಳಾಲ | 26 | 8 |
| 7. | ವಿಟ್ಲ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ವಿಟ್ಲ | 16 | 7 |
| 8. | ಪಿ.ಎ. ಕಾಲೇಜು, ಕಂಬಳಪದವು | 25 | 9 |
| 9. | ಹೀರಾ ಮಹಿಳಾ ಕಾಲೇಜು, ತೊಕ್ಕೊಟ್ಟು | 22 | 4 |
| 10. | ಕಣಚೂರು ಕಾಲೇಜು, ದೇರಳಕಟ್ಟೆ | 08 | 3 |

ಮೇಲಿನ ಕೋಷ್ಟಕವು ದ.ಕ. ಜಿಲ್ಲೆಯ ೧೦ ಕಾಲೇಜುಗಳ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳನ್ನು ತೋರಿಸುತ್ತದೆ. ಕೋಷ್ಟಕದಲ್ಲಿ ಸಂತ ಅಲೋಶಿಯಸ್ ಕಾಲೇಜು ಅತ್ಯಂತ ಹೆಚ್ಚು ಸಿಬ್ಬಂದಿ ಅಂದರೆ ೧೪೨ ಮಂದಿ ಬೋಧಕ ಸಿಬ್ಬಂದಿಯನ್ನು ಒಳಗೊಂಡಿದ್ದು ಕಣಚೂರು ಕಾಲೇಜು ಕೇವಲ ೮ ಮಂದಿ ಬೋಧಕ ಸಿಬ್ಬಂದಿಯನ್ನು ಮಾತ್ರ ಒಳಗೊಂಡಿದೆ. ಬೋಧಕೇತರ ಸಿಬ್ಬಂದಿಗಳಲ್ಲಿಯೂ ಸಂತ ಅಲೋಶಿಯಸ್ ಕಾಲೇಜು ೮೨ ಸಿಬ್ಬಂದಿಗಳನ್ನು ಹೊಂದಿದ್ದು ಕಣಚೂರು ಕಾಲೇಜು ೩ ಬೋಧಕೇತರ ಸಿಬ್ಬಂದಿಗಳನ್ನು ಹೊಂದಿದೆ. ಇಲ್ಲಿ ಇತರ ಎಲ್ಲಾ ಕಾಲೇಜುಗಳಿಗೆ ಹೋಲಿಸಿದರೆ ಕಣಚೂರು ಕಾಲೇಜಿನಲ್ಲಿ ಕಡಿಮೆ

ಸಿಬ್ಬಂದಿಗಳಿರುವುದನ್ನು ತೋರಿಸುತ್ತದೆ. ಪ್ರಮೇಯ ೩ರಲ್ಲಿ ತಿಳಿಸಿರುವಂತೆ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳ ಕೊರತೆಯನ್ನು ಎತ್ತಿ ತೋರಿಸುತ್ತದೆ.

### ೪.೬.೨ ಸಿಬ್ಬಂದಿಗಳ ಸಂಖ್ಯೆ

ಕೆಳಗಿನ ಕೋಷ್ಟಕವು ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳ ಸಂಖ್ಯೆಯನ್ನು ತೋರಿಸುತ್ತದೆ.

**ಕೋಷ್ಟಕ ೪.೮. ಸಿಬ್ಬಂದಿಗಳ ಸಂಖ್ಯೆ**

| ಕ್ರ. ಸಂ. | ಪ್ರತ್ಯುತ್ತರ | ಬೋಧಕ ಸಿಬ್ಬಂದಿ | ಬೋಧಕೇತರ ಸಿಬ್ಬಂದಿ |
|---|---|---|---|
| 1. | 50ಕ್ಕಿಂತ ಕಡಿಮೆ | 7 | 10 |
| 2. | 50-100ರವರೆಗೆ | 3 | 0 |
| 3. | 100ರಿಂದ ಮೇಲ್ಪಟ್ಟು | 0 | 0 |

ಮೇಲಿನ ಕೋಷ್ಟಕದಲ್ಲಿ ೭ ಬೋಧಕ ಸಿಬ್ಬಂದಿಗಳು ಮತ್ತು ೧೦ ಬೋಧಕೇತರ ಸಿಬ್ಬಂದಿಗಳು ೫೦ಕ್ಕಿಂತ ಕಡಿಮೆ ವರ್ಗದಲ್ಲಿ ಸೇರುತ್ತಾರೆ. ೩ ಬೋಧಕ ಸಿಬ್ಬಂದಿಗಳು ೫೧ರಿಂದ ೧೦೦ರ ವರೆಗಿನ ವರ್ಗದಲ್ಲಿಯೂ ಸೇರುತ್ತಾರೆ. ಕೋಷ್ಟಕದಲ್ಲಿ ೧೦೦ರಿಂದ ಮೇಲ್ಪಟ್ಟವರ ವರ್ಗವು ಸೊನ್ನೆಯಾಗಿರುತ್ತದೆ. ಗ್ರಾಮೀಣ ಪ್ರದೇಶಗಳಲ್ಲಿರುವ ಹೆಚ್ಚಿನ ಕಾಲೇಜುಗಳಲ್ಲಿ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳ ಕೊರತೆಯಿದೆ. ಹಾಗಾಗಿ ಉತ್ತಮ ಸಿಬ್ಬಂದಿಗಳ ನೇಮಕಾತಿಯ ಅವಶ್ಯಕತೆಯಿದೆ. ಸಿಬಂದಿಗಳಿಗೆ ಉತ್ತಮ ತರಬೇತಿ, ಹೊಂದಾಣಿಕೆ ಮತ್ತು ಸ್ವ–ಸ್ಪರ್ಧಾತ್ಮಕತೆಗೆ ಅವಕಾಶ ಮಾಡಿಕೊಡಬೇಕಾಗುತ್ತದೆ. ಸಿಬ್ಬಂದಿಗಳ ಸಂಖ್ಯೆಯನ್ನು ಹೆಚ್ಚಿಸಿ ಅವರ ಯೋಗಕ್ಷೇಮ, ಪ್ರೋತ್ಸಾಹ ಮುಂತಾದ ರೀತಿಯಲ್ಲಿ ಉತ್ತೇಜನ ನೀಡಿ ಉತ್ತಮ ಕೆಲಸದ ವಾತಾವರಣವನ್ನು ಸೃಷ್ಟಿಸಬೇಕಾಗುತ್ತದೆ ಎಂಬುದು ಪ್ರಮೇಯದಿಂದ ತಿಳಿದುಬರುವಂತೆ ಅವುಗಳಿಗೆ ಪೂರಕ ಅವಕಾಶವನ್ನು ನೀಡುವುದು ಸಂಸ್ಥೆಯ ಕರ್ತವ್ಯವಾಗಿದೆ.

### ೪.೬.೩ ಬೋಧನಾ ಮಾಧ್ಯಮಗಳು

ಕೆಳಗಿನ ಕೋಷ್ಟಕದಲ್ಲಿ ಬೋಧನೆಯ ಮಾಧ್ಯಮಗಳನ್ನು ತಿಳಿಸಲಾಗಿದೆ.

**ಕೋಷ್ಟಕ ೪.೯. ಬೋಧನಾ ಮಾಧ್ಯಮ**

| ಕ್ರ. ಸಂ. | ಬೋಧನಾ ಮಾಧ್ಯಮ | ಕಾಲೇಜುಗಳ ಸಂಖ್ಯೆ | ಪ್ರತ್ಯುತ್ತರ |
|---|---|---|---|
| 1. | ಇಂಗ್ಲಿಷ್ | 10 | 10 |
| 2. | ಕನ್ನಡ | 10 | 5 |
| 3. | ಹಿಂದಿ | 10 | 2 |
| 4. | ಸಂಸ್ಕೃತ | 10 | 2 |

ಎಲ್ಲಾ ಕಾಲೇಜುಗಳಲ್ಲಿಯೂ ಇಂಗ್ಲಿಷನ್ನು ಬೋಧನಾ ಮಾಧ್ಯಮವಾಗಿ ಅಳವಡಿಸಿಕೊಳ್ಳಲಾಗಿದೆ. ೫ ಕಾಲೇಜುಗಳಲ್ಲಿ ಕನ್ನಡವನ್ನು ೨ ಕಾಲೇಜುಗಳಲ್ಲಿ ಹಿಂದಿಯನ್ನು ಮತ್ತು ೨ ಕಾಲೇಜುಗಳಲ್ಲಿ ಸಂಸ್ಕೃತವನ್ನು ಕಲಿಸಲಾಗುತ್ತದೆ. ಆದರೆ ಗ್ರಾಮೀಣ ಕಾಲೇಜುಗಳಲ್ಲಿ ಹೆಚ್ಚಾಗಿ ಇಂಗ್ಲಿಷ್ ಮತ್ತು ಕನ್ನಡವನ್ನೇ ಬಳಸಲಾಗುತ್ತದೆ. ಕೆಳಗಿನ ನಕ್ಷೆಯಲ್ಲಿ ಬೋಧನಾ ಮಾಧ್ಯಮದ ಬಗ್ಗೆ ತಿಳಿಯಬಹುದು.




**ನಕ್ಷೆ ೪.೪. ಬೋಧನಾ ಮಾಧ್ಯಮ**

**೪.೬.೪ ದೊರಕುತ್ತಿರುವ ಸೌಲಭ್ಯಗಳು**

ಹೆಚ್ಚಿನ ಎಲ್ಲಾ ಕಾಲೇಜುಗಳಲ್ಲಿ ಉತ್ತಮ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ. ಗ್ರಂಥಾಲಯ, ಉದ್ಯೋಗಸ್ಥರ ಮಂಡಳಿ, ಕ್ರೀಡೆಗಳು, ಪ್ರಯೋಗಶಾಲೆ, ಶೋತೃಮಂದಿರ, ಫಲಹಾರ ಮಂದಿರ, ಎನ್.ಎಸ್.ಎಸ್. ಎನ್.ಸಿ.ಸಿ., ವಸತಿಗೃಹ, ಅತಿಥಿಗೃಹ, ಆಸ್ಪತ್ರೆ ಮುಂತಾದ ದೊರಕುವ ಸೌಲಭ್ಯಗಳ ಬಗ್ಗೆ ಕೆಳಗಿನ ಕೋಷ್ಟಕದಲ್ಲಿ ತೋರಿಸಲಾಗಿದೆ.

**ಕೋಷ್ಟಕ ೪.೧೦. ದೊರಕುತ್ತಿರುವ ಸೌಲಭ್ಯಗಳು**

| ಕ್ರ. ಸಂ. | ವಿವಿಧ ಸೌಲಭ್ಯಗಳು | ದೊರಕುತ್ತಿರುವ ಸೌಲಭ್ಯ | ಶೇಕಡಾ |
|---|---|---|---|
| 1. | ಗ್ರಂಥಾಲಯ | 10 | 100 |
| 2. | ಉದ್ಯೋಗಸ್ಥರ ಮಂಡಳಿ | 10 | 100 |
| 3. | ಕ್ರೀಡೆಗಳು | 10 | 100 |
| 4. | ಪ್ರಯೋಗಶಾಲೆ | 6 | 60 |
| 5. | ಶೋತೃಮಂದಿರ | 8 | 80 |
| 6. | ಫಲಹಾರ ಮಂದಿರ | 5 | 50 |
| 7. | ಎನ್.ಎಸ್.ಎಸ್. | 8 | 80 |
| 8. | ಎನ್.ಸಿ.ಸಿ. | 5 | 50 |
| 9. | ವಸತಿಗೃಹ | 6 | 60 |
| 10. | ಅತಿಥಿಗೃಹ | 3 | 30 |
| 11. | ಆಸ್ಪತ್ರೆ | 2 | 20 |

ಮೇಲಿನ ಕೋಷ್ಟಕವು ಎಲ್ಲಾ ೧೦ ಕಾಲೇಜುಗಳಲ್ಲಿ ಗ್ರಂಥಾಲಯ, ಉದ್ಯೋಗಸ್ಥರ ಮಂಡಳಿ ಮತ್ತು ಕ್ರೀಡೆಗಳಿರುವುದನ್ನು ತೋರಿಸುತ್ತದೆ. ಶೋತೃಮಂದಿರ ಮತ್ತು ಎನ್.ಎಸ್.ಎಸ್.ಗಳು ೮ ಕಾಲೇಜುಗಳಲ್ಲಿ

ದೊರೆಯುವುದು. ಪ್ರಯೋಗಶಾಲೆ ಮತ್ತು ವಸತಿಗೃಹಗಳು ೬ ಕಾಲೇಜುಗಳಲ್ಲಿ, ಎನ್.ಸಿ.ಸಿ., ಫಲಾಹಾರ ಮಂದಿರ ೫ ಕಾಲೇಜುಗಳಲ್ಲಿ, ೩ ಕಾಲೇಜುಗಳಲ್ಲಿ ಅತಿಥಿಗೃಹ ಹಾಗೂ ೨ ಕಾಲೇಜುಗಳಲ್ಲಿ ಆಸ್ಪತ್ರೆ ಸೌಕರ್ಯಗಳು ದೊರೆಯುವುವು. ಇದನ್ನು ಕೆಳಗಿನ ನಕ್ಷೆಯಲ್ಲಿ ನೋಡಬಹುದು.




**ನಕ್ಷೆ ೪.೫. ದೊರಕುತ್ತಿರುವ ಸೌಲಭ್ಯಗಳು**

## ೪.೭ ಕೆಲಸದ ತೃಪ್ತಿ

ಸಾಮಾನ್ಯವಾಗಿ ಕಾಲೇಜುಗಳ ಸಿಬ್ಬಂದಿಗಳಲ್ಲಿ ಕೆಲಸದ ಬಗ್ಗೆ ತೃಪ್ತಿಯನ್ನು ಹೊಂದಿರುವವರ ಸಂಖ್ಯೆಯು ಕಡಿಮೆ ಇದೆ. ಉದ್ದೇಶದಲ್ಲಿ ತಿಳಿಸಿದಂತೆ ಸಿಬ್ಬಂದಿಗಳ ನೇಮಕಾತಿಯ ಬಗ್ಗೆ ಅಸಮಾಧಾನ, ವೇತನ, ವೃತ್ತಿಗೆ ಬೇಕಾದ ಸ್ಥಳಾವಕಾಶಗಳು, ತರಬೇತಿ ಕಾರ್ಯಕ್ರಮಗಳು, ಉತ್ತಮ ಮಾಹಿತಿ ಜ್ಞಾನ, ಸೌಲಭ್ಯ ಸೌಕರ್ಯಗಳು ಮುಂತಾದವುಗಳ ಬಗ್ಗೆ ಸಿಬ್ಬಂದಿಗಳಲ್ಲಿ ಅಸಮಾಧಾನ ವ್ಯಕ್ತವಾಗಿದೆ. ಗ್ರಾಮೀಣ

ಕಾಲೇಜುಗಳಲ್ಲಿ ಯಾವುದೇ ರೀತಿಯ ಒಳ್ಳೆಯ ಅವಕಾಶಗಳು, ಸೌಲಭ್ಯಗಳು ಸರಿಯಾಗಿ ದೊರಕುತ್ತಿಲ್ಲ. ಪ್ರಮೇಯ ೨ರಲ್ಲಿ ತಿಳಿಸಿದಂತೆ ಸಿಬ್ಬಂದಿಗಳ ಹೊಂದಾಣಿಕೆಯ ಆವಶ್ಯಕತೆ ಇದೆ. ಹಾಗಾಗಿ ಹೆಚ್ಚಿನ ಸಿಬ್ಬಂದಿಗಳು ಅನೇಕ ಕೊರತೆಯನ್ನು ಎದುರಿಸುತ್ತಿದ್ದಾರೆ ಎಂಬುದು ವಿಶ್ಲೇಷಣೆಯಿಂದ ತಿಳಿದು ಬರುತ್ತದೆ. ಕಾಲೇಜಿನ ಸೇವಾನುಭವ ಮತ್ತು ತೃಪ್ತಿಯ ಬಗ್ಗೆ ಸಿಬ್ಬಂದಿಗಳ ಅಭಿಪ್ರಾಯವನ್ನು ಕೆಳಗಿನ ಕೋಷ್ಟಕದಲ್ಲಿ ತೋರಿಸಲಾಗಿದೆ.

**ಕೋಷ್ಟಕ ೪.೧೧. ಕೆಲಸದ ತೃಪ್ತಿ**

| ಸಂಪರ್ಕಿಸಿದ ಸಿಬ್ಬಂದಿಗಳ ಸಂಖ್ಯೆ | ಅತೃಪ್ತಿ | ತೃಪ್ತಿ | ಉತ್ತಮ | ಅತ್ಯುತ್ತಮ |
|---|---|---|---|---|
| 58 (100%) | 14 (24.13%) | 21 (36.20%) | 15 (25.86%) | 8 (13.79%) |

ಈ ಮೇಲಿನ ಕೋಷ್ಟಕದಲ್ಲಿ ಸಿಬ್ಬಂದಿಗಳ ಸೇವಾ ಅಭಿಪ್ರಾಯವನ್ನು ತಿಳಿಯಬಹುದು. ಸಂಶೋಧನೆಯಲ್ಲಿ ಒಟ್ಟು ೫೮ ಮಂದಿಯನ್ನು ಭೇಟಿಯಾಗಿದ್ದು ಅದರಲ್ಲಿ ೧೪ (೨೪.೧೩%) ಮಂದಿ ಕಾಲೇಜು ಸೇವೆಯಲ್ಲಿ ತೃಪ್ತಿ ಹೊಂದಿಲ್ಲ. ಇವರ ಪ್ರಕಾರ ಸರಕಾರದ ಸೌಕರ್ಯಗಳು ಸರಿಯಾಗಿ ದೊರಕುತ್ತಿಲ್ಲ. ಹಾಗಾಗಿ ಉತ್ತಮ ಸೌಲಭ್ಯಗಳ ಅಗತ್ಯವಿದೆ. ಉಳಿದ ೨೧ ಮಂದಿ ತೃಪ್ತಿ, ೧೫ ಮಂದಿ ಉತ್ತಮ ಹಾಗೂ ೮ ಮಂದಿ ಅತ್ಯುತ್ತಮ ಎಂದು ತಿಳಿಸಿದ್ದಾರೆ. ಇಲ್ಲಿ ಹೆಚ್ಚಿನ ಸಿಬ್ಬಂದಿಗಳಲ್ಲಿ ಸೌಕರ್ಯಗಳ ಬಗ್ಗೆ ಅಸಮಾಧಾನ ವ್ಯಕ್ತವಾಗಿದೆ.

## ೪.೮ ದೊರಕಿದ ಭಡ್ತಿಗಳು

ಹೆಚ್ಚಿನ ಕಾಲೇಜುಗಳಲ್ಲಿ ಸಿಬ್ಬಂದಿಗಳಿಗೆ ಸಿಗುವ ಭಡ್ತಿಗಳು ಕಡಿಮೆಯಿದೆ. ಪ್ರಮೇಯ ೧ ಹಾಗೂ ಉದ್ದೇಶ ೩ರಲ್ಲಿ ತಿಳಿಸಿದಂತೆ ಹೆಚ್ಚಿನ ಸಿಬ್ಬಂದಿಗಳು ತಮ್ಮ ನೇಮಕಾತಿ ಮತ್ತು ಭಡ್ತಿಯಲ್ಲಿ ಅಸಮಾಧಾನ ವ್ಯಕ್ತಪಡಿಸಿದ್ದಾರೆ. ಕೆಳಗಿನ ಕೋಷ್ಟಕದಲ್ಲಿ ಸಿಬ್ಬಂದಿಗಳ ಸೇವೆಗನುಗುಣವಾಗಿ ದೊರಕಿದ ಭಡ್ತಿಗಳನ್ನು ತೋರಿಸಲಾಗಿದೆ.

**ಕೋಷ್ಟಕ ೪.೧೨. ದೊರಕಿದ ಭಡ್ತಿಗಳು**

| ಕ್ರ. ಸಂ. | ಸಿಬ್ಬಂದಿಯ ಹುದ್ದೆ | ಒಟ್ಟು ಸೇವೆ | ದೊರಕಿದ ಭಡ್ತಿ |
|---|---|---|---|
| 1. | ಪ್ರಾಂಶುಪಾಲರು | 20 ವರ್ಷಕ್ಕಿಂತ ಮೇಲ್ಪಟ್ಟು | 2 |
| 2. | ಬೋಧಕರು | 10 ವರ್ಷಕ್ಕಿಂತ ಮೇಲ್ಪಟ್ಟು | 1 |
| 3. | ಬೆರಳಚ್ಚುಗಾರರು | 5 ವರ್ಷಕ್ಕಿಂತ ಮೇಲ್ಪಟ್ಟು | ಇಲ್ಲ |
| 4. | ಗುಮಾಸ್ತರು | 10 ವರ್ಷಕ್ಕಿಂತ ಮೇಲ್ಪಟ್ಟು | ಇಲ್ಲ |
| 5. | ಪೇದೆಗಳು | 5 ವರ್ಷಕ್ಕಿಂತ ಮೇಲ್ಪಟ್ಟು | ಇಲ್ಲ |
| 6. | ಕಾವಲುಗಾರ | 5 ವರ್ಷಕ್ಕಿಂತ ಮೇಲ್ಪಟ್ಟು | ಇಲ್ಲ |

58 ಮಂದಿ ಸಿಬ್ಬಂದಿಗಳಲ್ಲಿ ಪ್ರಾಂಶುಪಾಲರಿಗೆ ಕೇವಲ ೨ ಭಡ್ತಿ ಮಾತ್ರ ಸಿಕ್ಕಿದೆ ಮತ್ತು ಬೋಧಕರಿಗೆ ೧ ಭಡ್ತಿ ಸಿಕ್ಕಿದೆ. ಉಳಿದವರಿಗೆ ಯಾವುದೇ ಭಡ್ತಿ ಸಿಕ್ಕಿಲ್ಲ. ಬೆರಳಚ್ಚುಗಾರರು, ಗುಮಾಸ್ತರು, ಪೇದೆ ಮತ್ತು ಕಾವಲುಗಾರರು ಯಾವುದೇ ಭಡ್ತಿ ಇಲ್ಲದೆ ಸೇವೆ ಸಲ್ಲಿಸುತ್ತಿದ್ದಾರೆ. ಇಲ್ಲಿ ಸಿಬ್ಬಂದಿಗಳಿಗೆ ಯಾವುದೇ ರೀತಿಯ ಭಡ್ತಿಯನ್ನು ನೀಡದೆ ತಿರಸ್ಕಾರ ಮಾಡಲಾಗುತ್ತಿದೆ ಎಂಬುದನ್ನು ತೋರಿಸುತ್ತದೆ. ಭಡ್ತಿಯು ಸಿಬ್ಬಂದಿಗಳಲ್ಲಿ ಉತ್ತಮ ಸೇವೆಯನ್ನು ಒದಗಿಸುವುದರಲ್ಲಿ ಸಹಾಯಕವಾಗುತ್ತದೆ. ಪ್ರಮೇಯ ೧ರಲ್ಲಿ ತಿಳಿಸಿದಂತೆ ಹೆಚ್ಚಿನ ಸಿಬ್ಬಂದಿಗಳಲ್ಲಿ ಭಡ್ತಿ ಮತ್ತು ನೇಮಕಾತಿಯಲ್ಲಿ ಸಂತೋಷವಿಲ್ಲ.

# ಅಧ್ಯಾಯ – ೫

## ಸಾರ ಮತ್ತು ಕೊನೆಮಾತು

೫.೧ ಸಾರ

೫.೨ ಅಧ್ಯಯನದ ಶೋಧ

೫.೩ ಕೊನೆಯ ಮಾತು

೫.೪ ಸಲಹೆ ಸೂಚನೆಗಳು

೫.೫ ಅಭಿವೃದ್ಧಿ ಬಗ್ಗೆ ಕಾಲೇಜಿಗೆ ಸಲಹೆ ಸೂಚನೆಗಳು

# ಅಧ್ಯಾಯ – ೫

# ಸಾರ ಮತ್ತು ಕೊನೆಮಾತು

## ೫.೧ ಸಾರ

ಶಿಕ್ಷಣವು ವೈಯಕ್ತಿಕ ಗಳಿಕೆ, ಜ್ಞಾನ, ಅಭಿವೃದ್ಧಿ ಕೌಶಲ್ಯ ಮುಂತಾದ ವಿಶಾಲ ಅರ್ಥವನ್ನು ಒಳಗೊಂಡಿದೆ. ಔಪಚಾರಿಕ ಶಿಕ್ಷಣವು ಶಾಲಾ ಕಾಲೇಜುಗಳಲ್ಲಿ ನೇರವಾಗಿ ಪಡೆಯುವ ಶಿಕ್ಷಣವಾಗಿದೆ. ಅನೌಪಚಾರಿಕ ಶಿಕ್ಷಣವು ದಿನನಿತ್ಯದ ಚಟುವಟಿಕೆಗಳಿಗೆ ಸಂಬಂಧಿಸಿದ್ದು ಮಾಧ್ಯಮಗಳು, ಪುಸ್ತಕಗಳು, ರೇಡಿಯೋ, ಟಿ.ವಿ., ತರಬೇತಿ ಶಿಬಿರಗಳು ಮುಂತಾದ ಅನೌಪಚಾರಿಕ ಶಿಕ್ಷಣಕ್ಕೆ ಉದಾಹರಣೆಗಳಾಗಿವೆ.

ಶಿಕ್ಷಣವು ಐತಿಹಾಸಿಕ ವಿಷಯವಾಗಿದ್ದು ಆಧುನಿಕ ಬೆಳವಣಿಗೆಯಲ್ಲಿ ಶಿಕ್ಷಣದ ಪಾತ್ರವು ಅಮೋಘವಾದುದು. ಇತ್ತೀಚೆಗೆ ಶಿಕ್ಷಣದಲ್ಲಿ ಮಹಿಳೆಯರ ಪಾತ್ರವು ಮಹತ್ತರವಾದುದು. ಗ್ರಾಮೀಣ ಪ್ರದೇಶದಲ್ಲಿ ಅನೇಕ ಶಾಲಾ ಕಾಲೇಜುಗಳು ತಲೆ ಎತ್ತುವುದರಿಂದ ಗ್ರಾಮೀಣ ಮಹಿಳೆಯರು ಕೂಡಾ ನಗರ ಪ್ರದೇಶಗಳ ಮಹಿಳೆಯರಿಗಿಂತಲೂ ಹೆಚ್ಚಿನ ಉತ್ತಮ ಸಾಧನೆಯನ್ನು ಮಾಡುತ್ತಿದ್ದಾರೆ. ಪ್ರತಿಯೊಬ್ಬ ಮಹಿಳೆಯೂ ಕೂಡ ಶಿಕ್ಷಣದಲ್ಲಿ ಮುಂದಿದ್ದು ಕಾಲೇಜು ಶಿಕ್ಷಣವನ್ನು ಪಡೆಯುವಲ್ಲಿ ಯಶಸ್ವಿಯಾಗಿದ್ದಾಳೆ.

ಮಹಿಳೆಯರು ಉತ್ತಮ ಶಿಕ್ಷಣವನ್ನು ಹೊಂದಿ ಮುಂದೆ ಒಂದು ವೃತ್ತಿಯನ್ನು ಅನುಸರಿಸಿಕೊಂಡು ಹೋಗುತ್ತಾರೆ. ಅದರಲ್ಲಿ ಅಧ್ಯಾಪನಾ ವೃತ್ತಿಯು ಒಂದಾಗಿದೆ. ಕಾಲೇಜುಗಳಿಂದ ಶಿಕ್ಷಕಿಯರಿಗೆ ದೊರಕುವ ಸೌಲಭ್ಯಗಳನ್ನು ಉಪಯೋಗಿಸಿಕೊಳ್ಳುತ್ತಿದ್ದಾರೆ. ಕಾಲೇಜುಗಳಲ್ಲಿ ನಡೆಯುವ ಸಮಾವೇಶ, ವಿಚಾರಸಂಕಿರಣ ಮುಂತಾದ ತರಬೇತಿ ಕಾರ್ಯಗಳಲ್ಲಿ ಭಾಗವಹಿಸುತ್ತಾರೆ. ಪ್ರತಿಯೊಂದು ಮಹಿಳೆಯೂ ಕೂಡಾ ಪುರುಷರಂತೆ ತಾವು ಎಲ್ಲದರಲ್ಲಿಯೂ ಸಮಾನಳು ಎಂದು ತೋರಿಸಿ ಆಧುನೀಕರಣಕ್ಕೆ ಹೊಸ ಹಾದಿಯನ್ನು ತೋರಿಸಿಕೊಂಡು ಬರುತ್ತಿದ್ದಾಳೆ.

ಮಹಿಳಾ ಶಿಕ್ಷಣ ಮತ್ತು ಅಭಿವೃದ್ಧಿ ಆರ್ಥಿಕ, ರಾಜಕೀಯ, ಸಾಮಾಜಿಕ, ಮತ್ತು ಸಾಂಸ್ಕೃತಿಕಗಳ ನಡುವೆ ನೇರವಾದ ಮತ್ತು ನಿಕಟವಾದ ಸಂಬಂಧವಿದೆ. ಶಿಕ್ಷಣವು ಸಾಮಾಜಿಕ ಮತ್ತು ಆರ್ಥಿಕಾಭಿವೃದ್ಧಿಗೆ ಆವಶ್ಯಕವೆಂಬುದನ್ನು ಪ್ರತಿಫಲಿಸುವುದು. ಮಹಿಳಾ ಶಿಕ್ಷಣದ ಮಟ್ಟ ಮತ್ತು ಶಿಕ್ಷಣದಲ್ಲಿನ ಲಿಂಗ ಅಂತರಗಳು ಕುಟುಂಬ ಯೋಗಕ್ಷೇಮ ಮತ್ತು ಆರ್ಥಿಕ ಬೆಳವಣಿಗೆಯ ಪ್ರಮುಖ ನಿರ್ಣಾಯಕಗಳಾಗಿವೆ. ತಾಯಂದಿರ

ಶಿಕ್ಷಣವು ಆಕೆಯ ಮಕ್ಕಳ ವಿಶೇಷವಾಗಿ ಹೆಣ್ಮಕ್ಕಳ ಶೈಕ್ಷಣಿಕ ಸಾಧನೆಯನ್ನು ಹೆಚ್ಚಿಸುತ್ತದೆ. ಶಿಕ್ಷಣವು ಮಹಿಳೆಯರು ತಮ್ಮ ಹಕ್ಕುಗಳನ್ನು ಮತ್ತು ಜವಾಬ್ದಾರಿಗಳನ್ನು ಚಲಾಯಿಸುವ ನಿರ್ವಹಿಸುವ ಸಾಮರ್ಥ್ಯವನ್ನು ವೃದ್ಧಿಸುವುದು.

ಮಹಿಳೆಯರನ್ನು ಅಭಿವೃದ್ಧಿಯಲ್ಲಿ ಪುರುಷರಿಗೆ ಸಮಾನ ಪಾಲುದಾರರು ಎಂದು ಪರಿಗಣಿಸಿದಾಗ ಮಾತ್ರವೇ ದೇಶದ ಸರ್ವತೋಮುಖ ಬೆಳವಣಿಗೆಯಾಗಲು ಸಾಧ್ಯ. ಇಂದು ತ್ವರಿತ ಆರ್ಥಿಕ ಅಭಿವೃದ್ಧಿಯನ್ನು ಸಾಧಿಸಲು ಮಹಿಳಾ ಶಿಕ್ಷಣವನ್ನು ಉತ್ತಮ ಪಡಿಸುವುದು ಅಗತ್ಯವಿದೆ. ಈ ಅಧ್ಯಯನವು ಕಾಲೇಜು ಶಿಕ್ಷಣದಲ್ಲಿ ಮಹಿಳಾ ಶಿಕ್ಷಕಿಯರ ಅಭಿವೃದ್ಧಿ ಬಗೆಗಿನ ಮಾಹಿತಿಯನ್ನು ತೋರಿಸುತ್ತದೆ. ವಿಶ್ಲೇಷಣೆ ಭಾಗದಲ್ಲಿ ಸಂಗ್ರಹಿಸಿದ ಮಾಹಿತಿಯಲ್ಲಿ ಕಂಡುಕೊಂಡ ವಿಚಾರವನ್ನು ವಿವರಿಸಲಾಗಿದೆ. ಗ್ರಾಮೀಣ ಮತ್ತು ನಗರ ಪ್ರದೇಶಗಳ ಕಾಲೇಜುಗಳಲ್ಲಿ ಶಿಕ್ಷಕರಿಗೆ ಇರುವ ಸೌಕರ್ಯಗಳು ಮತ್ತು ಅಭಿವೃದ್ಧಿ ಬಗ್ಗೆ ಮಾಹಿತಿಯನ್ನು ತೋರಿಸಲಾಗಿದೆ.

ಮೊದಲನೆಯ ಅಧ್ಯಯನದಲ್ಲಿ ಅಧ್ಯಯನದ ಉದ್ದೇಶಗಳು, ವ್ಯಾಪ್ತಿ, ಮಹತ್ವವನ್ನು ತಿಳಿಸಲಾಗಿದೆ. ಯಾವ ಉದ್ದೇಶಗಳನ್ನು ಮುಂದಿಟ್ಟುಕೊಂಡು ಅಧ್ಯಯನವನ್ನು ಕೈಗೊಳ್ಳಲಾಗಿದೆ. ಅಧ್ಯಯನವು ಏಕೆ ಮಹತ್ವಪೂರ್ಣವಾಗಿದೆ ಹಾಗೂ ವ್ಯಾಪ್ತಿಯಲ್ಲಿ ಯಾವೆಲ್ಲಾ ಪರಿಕಲ್ಪನೆ ವಿಷಯಗಳನ್ನು ಬಳಸಿಕೊಳ್ಳಲಾಗಿದೆ ಎಂದು ವಿವರಿಸಲಾಗಿದೆ. ಅಧ್ಯಯನವು ಕಾಲೇಜು ಶಿಕ್ಷಣದ ಅಧ್ಯಾಪಿಕೆಯರಿಗೆ ಸಂಬಂಧಿಸಿದ್ದರಿಂದ ದಕ್ಷಿಣ ಕನ್ನಡ ಜಿಲ್ಲೆಯ ಕಾಲೇಜುಗಳ ಚಿತ್ರಣವನ್ನು ನೀಡಲಾಗಿದೆ.

ಎರಡನೆಯ ಅಧ್ಯಯನದಲ್ಲಿ ಶಿಕ್ಷಣದ ಅಭಿವೃದ್ಧಿ, ಮಹಿಳಾ ಶಿಕ್ಷಣ, ಮಹಿಳೆ ಅಂದು ಮತ್ತು ಇಂದು, ಮಹಿಳೆ ಮತ್ತು ಅಭಿವೃದ್ಧಿ ಬಗ್ಗೆ ತಿಳಿಸಲಾಗಿದೆ. ಮಹಿಳೆಯರ ಅಭಿವೃದ್ಧಿಗೆ ಸಂಬಂಧಿಸಿದಂತೆ ಆಧುನಿಕ ಯುಗದಲ್ಲಿ ಬರುವಂತಹ ತಂತ್ರಜ್ಞಾನಗಳ ಬಳಕೆ, ಹೊಸ ಹೊಸ ಪಠ್ಯಕ್ರಮಗಳ ಬಗ್ಗೆ ತಿಳಿದಿದ್ದು, ಅದನ್ನು ವಿದ್ಯಾರ್ಥಿಗಳಲ್ಲಿ ಯಾವ ರೀತಿ ಉಪಯೋಗಿಸಿಕೊಳ್ಳುತ್ತಿದ್ದಾರೆ ಎಂಬುದನ್ನು ತಿಳಿಯಬಹುದು. ಶಿಕ್ಷಕರು ಕಾಲೇಜಿನಲ್ಲಿ ಮಾಡುವ ದಿನನಿತ್ಯದ ಕೆಲಸದ ವಿವರಗಳು ಹಾಗೂ ಕಾಲೇಜಿಗೆ ಸಂಬಂಧಿಸಿದಂತೆ ಕಾಲೇಜಿನ ಒಳಗೆ ಹಾಗೂ ಹೊರಗೆ ಅವರು ತಮ್ಮನ್ನು ಯಾವ ರೀತಿ ಮುಡಿಪಾಗಿಟ್ಟುಕೊಂಡಿದ್ದಾರೆ ಎಂಬುದನ್ನು ತಿಳಿಯಬಹುದು.

ಮೂರನೇ ಅಧ್ಯಾಯದಲ್ಲಿ ಉನ್ನತ ಶಿಕ್ಷಣ, ಮಹಿಳೆ ಮತ್ತು ಉನ್ನತ ಶಿಕ್ಷಣ ನೀತಿಗಳು ಮಹಿಳೆಯರ ಪಾಲ್ಗೊಳ್ಳುವಿಕೆಗೆ ಇರುವ ಅಡೆತಡೆಗಳು, ಉನ್ನತ ಶಿಕ್ಷಣದ ವಾಣಿಜ್ಯೀಕರಣ ಮತ್ತು ಉನ್ನತ ಶಿಕ್ಷಣದ ಏಳುಬೀಳುಗಳು ಎಂಬಿತ್ಯಾದಿ ವಿಷಯಗಳನ್ನು ಚರ್ಚಿಸಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ ಸಂಸ್ಥೆಯಿಂದ ಪಡೆದ ಮಾಹಿತಿ, ಸಂಸ್ಥೆಯ ಧ್ಯೇಯೋದ್ದೇಶಗಳು, ಲಕ್ಷ್ಯ, ಕಾರ್ಯವ್ಯಾಪ್ತಿ, ತರಬೇತಿಗಳು ಇತ್ಯಾದಿ ವಿಷಯಗಳ ಬಗ್ಗೆ ಮಾಹಿತಿ ವಿಶ್ಲೇಷಣೆ ಮಾಡಲಾಗಿದೆ ಮತ್ತು ವಿಶ್ಲೇಷಣೆಯಿಂದ ತಿಳಿದುಬಂದ ಅಂಶವಾದ ಅದ್ಯಾಪಿಕೆಯರ ಅಭಿವೃದ್ಧಿ ಬಗ್ಗೆ ವಿವರಿಸಲಾಗಿದೆ.

ಕೊನೆಯ ಈ ಅಧ್ಯಾಯದಲ್ಲಿ ಇಡೀ ಅಧ್ಯಯನದ ಸಾರ, ಶೋಧ, ಕೊನೆಮಾತು ಮತ್ತು ಕೆಲವು ಸಲಹೆ ಸೂಚನೆಗಳನ್ನು ನೀಡಲಾಗಿದೆ.

## ೫.೨ ಅಧ್ಯಯನದ ಶೋಧ

ಅಭಿವೃದ್ಧಿಯು ದೇಶದ ಮಾನವ ಸಂಪನ್ಮೂಲದ ಪೂರ್ಣಪ್ರಮಾಣದ ಬಳಕೆಯನ್ನು ಬಯಸುತ್ತದೆ. ಮಾನವ ಸಂಪನ್ಮೂಲದ ಮುಖ್ಯ ಭಾಗವಾಗಿರುವ ಮಹಿಳೆಯರನ್ನು ಸರಿಯಾದ ರೀತಿಯಲ್ಲಿ ಬಳಸಿಕೊಳ್ಳಬೇಕು ಎಂಬುದು ಕಂಡುಕೊಂಡ ವಿಚಾರ. ಮಾತ್ರವಲ್ಲದೆ ಮಹಿಳೆಯರನ್ನು ಅಭಿವೃದ್ಧಿಯ ಮುಖ್ಯವಾಹಿನಿಗೆ ತರಬೇಕಾದ ಅಗತ್ಯವಿದೆ. ಈ ನಿಟ್ಟಿನಲ್ಲಿ ಭಾರತೀಯ ಮಹಿಳೆಯರ ಅಭಿವೃದ್ಧಿಯನ್ನು ಸರಿಯಾಗಿ ವಿಶ್ಲೇಷಿಸಲು ಮತ್ತಷ್ಟು ಅಧ್ಯಯನದ ಅವಶ್ಯಕತೆ ಇದೆ. ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಮಹಿಳೆಯರು ಯಾವ ರೀತಿ ಒಳಗೊಳ್ಳಲ್ಪಟ್ಟರು ಮತ್ತು ಅಭಿವೃದ್ಧಿಯಲ್ಲಿ ಹೇಗೆ ಸ್ವೀಕರಿಸಲ್ಪಟ್ಟರು ಎಂಬುದು ಗಮನಿಸಬೇಕಾದ ಅಂಶ.

ಮಹಿಳಾ ಸಶಕ್ತೀಕರಣ ಪ್ರಕ್ರಿಯೆಯಲ್ಲಿ ಮಹಿಳೆಯರನ್ನು ಆರ್ಥಿಕವಾಗಿ ಸ್ವಾವಲಂಬಿಗಳನ್ನಾಗಿ ಮಾಡಲು ಅವರನ್ನು ಅಭಿವೃದ್ಧಿಯ ಮುಖ್ಯವಾಹಿನಿಗೆ ತರಲು ಅವರನ್ನು ಶಿಕ್ಷಿತರನ್ನಾಗಿ ಮಾಡಬೇಕು. ಸ್ತ್ರೀಯರನ್ನು ಶಿಕ್ಷಿತರನ್ನಾಗಿ ಮಾಡದ ಹೊರತು ಅವರ ಅರ್ಹತೆ ಮತ್ತು ಶಕ್ತಿಯನ್ನು ಗುರುತಿಸಲು ಸಾಧ್ಯವಿಲ್ಲ. ಮಹಿಳೆಯರ ಬಗೆಗಿನ ಪುರುಷ ಸಮುದಾಯದ ನಿಲುವು ಬದಲಾಗಿರುವುದಕ್ಕೆ ಮುಖ್ಯ ಕಾರಣ ಹೆಚ್ಚುತ್ತಿರುವ ಮಹಿಳಾ ಶಿಕ್ಷಣ. ಶಿಕ್ಷಣದಿಂದಾಗಿ ಮಹಿಳೆಯರಿಗೆ ಉತ್ತಮ ಉದ್ಯೋಗಗಳು ದೊರೆತು ಮಹಿಳೆಯರನ್ನು ಸ್ವಾವಂಬಿಗಳನ್ನಾಗಿ ಮಾಡಲು ಪ್ರೇರೇಪಿಸುತ್ತದೆ.

ಈ ಅಧ್ಯಯನದಲ್ಲಿ ಕಾಲೇಜು ಶಿಕ್ಷಣದ ಮಹಿಳಾ ಅಧ್ಯಾಪಿಕೆಯರ ಅಭಿವೃದ್ಧಿ ಬಗೆಗಿನ ದತ್ತಾಂಶ ವಿಶ್ಲೇಷಣೆಯ ಕೆಲವು ಶೋಧವನ್ನು ಕೆಳಗೆ ತಿಳಿಸಲಾಗಿದೆ.

- ಎಲ್ಲಾ ಕಾಲೇಜುಗಳು ಮಂಗಳೂರು ವಿಶ್ವವಿದ್ಯಾನಿಲಯದಿಂದ ಮಾನ್ಯತೆ ಪಡೆದಿದೆ.
- ಕೆಲವು ಕಾಲೇಜುಗಳು ಸರಕಾರಿ ಅನುದಾನಿತ ಕಾಲೇಜುಗಳಾಗಿವೆ.

- ಅಧ್ಯಯನಕ್ಕೆ ತೆಗೆದುಕೊಂಡ ೧೦ ಕಾಲೇಜುಗಳಲ್ಲಿ ೯ ಕಾಲೇಜುಗಳಲ್ಲಿ ಕಲಾವಿಭಾಗಗಳನ್ನು ಹೊಂದಿದ್ದು, ೧೦ ಕಾಲೇಜುಗಳಲ್ಲಿ ಬಿ.ಕಾಂ., ಬಿ.ಬಿ.ಎಂ., ೬ ಕಾಲೇಜುಗಳಲ್ಲಿ ಕಂಪ್ಯೂಟರ್ ಶಿಕ್ಷಣ, ೩ ಕಾಲೇಜುಗಳಲ್ಲಿ ವಿಜ್ಞಾನ ಮತ್ತು ೨ ಕಾಲೇಜುಗಳಲ್ಲಿ ಬಿ.ಎಸ್.ಡಬ್ಲ್ಯು. ಕೋರ್ಸುಗಳು ಲಭ್ಯವಿದೆ.
- ಇಂಗ್ಲಿಷನ್ನು ಮುಖ್ಯ ಮಾಧ್ಯಮವನ್ನಾಗಿ ತೆಗೆದುಕೊಳ್ಳಲಾಗಿದ್ದು, ಕನ್ನಡ, ಹಿಂದಿ ಮತ್ತು ಸಂಸ್ಕೃತ ಭಾಷೆಗಳನ್ನು ಬಳಸಿಕೊಳ್ಳಲಾಗಿದೆ.
- ೫ ಕಾಲೇಜುಗಳಿಗೆ ನ್ಯಾಕ್ ಮಾನ್ಯತೆ ದೊರೆತಿದ್ದು, ಉತ್ತಮ ಶ್ರೇಣಿಯನ್ನು ಹೊಂದಿದೆ.
- ಎಲ್ಲಾ ಕಾಲೇಜುಗಳಲ್ಲಿ ಸೈದ್ಧಾಂತಿಕ ಮತ್ತು ಪ್ರಾಯೋಗಿಕ ಬೋಧನಾ ವಿಧಾನವನ್ನು ಹೊಂದಿದ್ದು ವಿಚಾರ ಸಂಕಿರಣ, ನೇಮಿತ ಯೋಜನೆ, ಪ್ರಬಂಧ, ಗುಂಪುಚರ್ಚೆ, ಸಮಾವೇಶ ಮುಂತಾದವುಗಳನ್ನು ಕೈಗೊಳ್ಳುತ್ತಾರೆ.
- ಸಂತ ಆಗ್ನೆಸ್ ಕಾಲೇಜಿನಲ್ಲಿ ಅತೀ ಹೆಚ್ಚು ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳನ್ನು ಹೊಂದಿದ್ದು, ಕಣಚೂರು ಕಾಲೇಜು ಅತ್ಯಂತ ಕಡಿಮೆ ಬೋಧಕ ಬೋಧಕೇತರ ಸಿಬ್ಬಂದಿಗಳನ್ನು ಹೊಂದಿದೆ.
- ಹೆಚ್ಚಿನ ಕಾಲೇಜುಗಳಲ್ಲಿ ಉತ್ತಮ ಸೌಲಭ್ಯಗಳನ್ನು ನೀಡಲಾಗಿದ್ದು, ಕೆಲವು ಕಾಲೇಜುಗಳಲ್ಲಿ ವಸತಿಗೃಹ, ಫಲಾಹಾರ ಮಂದಿರ, ಅತಿಥಿಗೃಹಗಳನ್ನು ನೀಡಲಾಗಿದೆ.
- ಎಲ್ಲಾ ಕಾಲೇಜುಗಳಲ್ಲಿ ಉತ್ತಮ ಕೊಠಡಿಗಳಿದ್ದು ಮೂಲ ಸೌಕರ್ಯಗಳನ್ನು ಒದಗಿಸಲಾಗಿದೆ.
- ಕೆಲವು ಕಾಲೇಜುಗಳಲ್ಲಿ ದೈಹಿಕ ಶಿಕ್ಷಣ ಕ್ರೀಡೆಗಳು ಆಟಗಳಿಗೆ ಹೆಚ್ಚಿನ ಪ್ರಾಮುಖ್ಯತೆ ನೀಡಿದೆ.
- ಹೆಚ್ಚಿನ ಎಲ್ಲಾ ಕಾಲೇಜುಗಳಿಗೂ ಸಂಸ್ಥೆಯಿಂದ ಕಾಲೇಜಿನ ಅಭಿವೃದ್ಧಿಗೆ ಬೇಕಾದಂತಹ ಉತ್ತಮ ಪ್ರೋತ್ಸಾಹವು ದೊರಕುತ್ತಿದೆ ಎಂದು ಅವಲೋಕನ ವಿಧಾನದಿಂದ ತಿಳಿದುಬರುತ್ತದೆ.

### ೫.೩ ಕೊನೆಯ ಮಾತು

ಭಾರತವು ಒಂದು ಮುಂದುವರಿಯುತ್ತಿರುವ ರಾಷ್ಟ್ರವೆಂದು ಹೇಳುವಾಗ ಆ ಮುಂದುವರಿಕೆಯಲ್ಲಿ ಮಹಿಳಾ ಸಮುದಾಯದಲ್ಲಿ ಆದಂತಹ ಪ್ರಗತಿಯನ್ನು ಒಳಗೊಂಡಿರಬೇಕು. ಮಹಿಳೆಯರು ಎಲ್ಲಿಯವರೆಗೆ ಅಡಿಯಾಳು ಸ್ಥಾನದಲ್ಲಿರುತ್ತಾರೋ ಮತ್ತು ತಮ್ಮ ಪ್ರತಿಭೆಗಳನ್ನು ತೋರ್ಪಡಿಸಲು ಸಾಧ್ಯವಿಲ್ಲವೋ

ಅಲ್ಲಿಯವರೆಗೆ ದೇಶದ ಸಾಮಾಜಿಕ, ಆರ್ಥಿಕ ಅಭಿವೃದ್ಧಿ ಕಾಣಲು ಸಾಧ್ಯವಿಲ್ಲ. ದೇಶದ ಮಾನವ ಸಂಪನ್ಮೂಲದ ಬಹು ಭಾಗವಾಗಿರುವ ಅವರು ದೇಶದ ಅಭಿವೃದ್ಧಿ ಮತ್ತು ಉತ್ಪಾದಕತೆಯಲ್ಲಿ ಪ್ರಮುಖ ಕೊಡುಗೆ ನೀಡಿದ್ದಾರೆ. ಹಾಗಿರುವಾಗ ಸಮಾಜದ ಕಲ್ಯಾಣಕ್ಕೆ ಲಿಂಗ ಸಮಾನತೆಯನ್ನು ಕಾಯ್ದುಕೊಳ್ಳಬೇಕಾಗಿರುವುದು ಅಗತ್ಯ. ದೇಶದ ಆರ್ಥಿಕ ಅಭಿವೃದ್ಧಿಯ ದೃಷ್ಟಿಯಿಂದ ತಮ್ಮ ಸಾಮರ್ಥ್ಯವನ್ನು ಹೊರಗೆಡಹಿ ಮಾರುಕಟ್ಟೆಯಲ್ಲಿ ಸ್ಪರ್ಧಿಸಲು ಪ್ರೋತ್ಸಾಹಿಸಬೇಕು. ಹೆಚ್ಚಿನ ರಂಗಗಳಲ್ಲಿ ಮಹಿಳೆಯರು ಯಶಸ್ವಿ ಶಿಕ್ಷಣದ ಮೂಲಕ ತಮ್ಮ ಪ್ರತಿಭೆಯನ್ನು ಮೆರೆದಿದ್ದಾರೆ.

ಶಿಕ್ಷಣವು ಆರ್ಥಿಕ ಸ್ವಾವಲಂಬನೆಗೆ ದಾರಿಮಾಡಿಕೊಡುತ್ತದೆ. ಯಶಸ್ಸನ್ನು ಸಾಧಿಸಲು ಮತ್ತು ಪರಿಪೂರ್ಣತೆಗೆ ಉತ್ತಮ ರೀತಿಯ ಯೋಜನೆಗಳನ್ನು ಹಾಕಿಕೊಳ್ಳಬೇಕು. ಶಿಕ್ಷಣದ ಅಭಿವೃದ್ಧಿಯು ಅಶಕ್ತರನ್ನು ಸಶಕ್ತರನ್ನಾಗಿ ಮತ್ತು ಆರ್ಥಿಕ ಸ್ವಾವಲಂಬಿಗಳನ್ನಾಗಿ ಮಾಡುವುದು. ಮಹಿಳೆ ಯಾವಾಗ ಒಬ್ಬ ಸ್ವತಂತ್ರ ವ್ಯಕ್ತಿಯಾಗಿ ಅಭಿವೃದ್ಧಿ ಕಾರ್ಯದಲ್ಲಿ ತನ್ನನ್ನು ತಾನು ತೊಡಗಿಸಿಕೊಳ್ಳುತ್ತಾಳೋ ಆಗ ಅಭಿವೃದ್ಧಿ ಎಂಬ ಪದದ ಮರುವ್ಯಾಖ್ಯಾನ ಅವಶ್ಯಕ.

ಗ್ರಾಮೀಣ ಪ್ರದೇಶಗಳಲ್ಲಿ ಮುಖ್ಯವಾಗಿ ಮಹಿಳೆಯರನ್ನು ಆರ್ಥಿಕವಾಗಿ, ಸಾಮಾಜಿಕವಾಗಿ ಮೇಲೆತ್ತುವ ಪ್ರಯತ್ನ ಮಾಡದಿದ್ದಲ್ಲಿ ಆರ್ಥಿಕ ಉನ್ನತಿ ಒಂದು ಹಗಲು ಕನಸು ಮಾತ್ರ. ದೇಶದ ಸರ್ವಾಂಗೀಣ ಪ್ರಗತಿಗಾಗಿ ಮಹಿಳೆಯರು ಸಲ್ಲಿಸುತ್ತಿರುವ ಸೇವೆ ಅತೀ ದೊಡ್ಡದು ಹಾಗೂ ಅಮೋಘವಾದುದು. ಆದ್ದರಿಂದಲೇ ಅವರನ್ನು ಅವರ ಶಕ್ತಿಯನ್ನು ಗುರುತಿಸಿ ಅಭಿವೃದ್ಧಿ ಪಥದಲ್ಲಿ ಮುನ್ನಡೆಯುವ ಅವಶ್ಯಕತೆ ಇದೆ.

## ೫.೪ ಸಲಹೆ ಸೂಚನೆಗಳು

ಕಾಲೇಜು ಶಿಕ್ಷಣದ ಮಹಿಳಾ ಅಧ್ಯಾಪಿಕೆಯರ ಅಭಿವೃದ್ಧಿಯನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಕೆಲವೊಂದು ಸಲಹೆ ಸೂಚನೆಗಳನ್ನು ಕೆಳಗೆ ಕೊಡಲಾಗಿದೆ.

- ಶಿಕ್ಷಣ ಮುಂದುವರೆಯಲು ಬಯಸುವ ಶಿಕ್ಷಕರಿಗೆ ಸಲಹೆ, ಸಂಪನ್ಮೂಲಗಳ ಅರಿವನ್ನು ತಿಳಿಸುವುದು.
- ಶಿಕ್ಷಣದಲ್ಲಿ ಹೊಸ ಆವಿಷ್ಕಾರಗಳಿಗೆ, ನಾವೀನ್ಯತೆಗಳಿಗೆ ಪ್ರೋತ್ಸಾಹ ಕಾರ್ಯಾಚರಣೆಗಳನ್ನು ನೀಡುವುದು.

- ಶಿಕ್ಷಣದಲ್ಲಿ ತಂತ್ರಜ್ಞಾನದ ಬಳಕೆ ಬಗ್ಗೆ ತರಬೇತಿ ನೀಡುವುದು.
- ಶಿಕ್ಷಕರಲ್ಲಿ ಸೃಜನಶೀಲತೆ ಅಭಿವೃದ್ಧಿ ಪಡಿಸುವುದು.
- ಲಭ್ಯವಿದ್ದ ಸಂಪನ್ಮೂಲಗಳ ಗರಿಷ್ಠ ಉಪಯೋಗ.
- ಶಿಕ್ಷಕರಲ್ಲಿ ಸಮಭಾವ, ಸಹೋದರತ್ವ ಬೆಳೆಸುವುದು.
- ಶಿಕ್ಷಕರಲ್ಲಿ ಸಾಮೂಹಿಕ ಪಾಲ್ಗೊಳ್ಳುವಿಕೆಯ ಮನೋಭಾವ ವೃದ್ಧಿಸುವುದು.
- ಶಿಕ್ಷಕರಿಗೆ ಬೋಧನ ವಿಧಾನ ಹಾಗೂ ಬೋಧನಾ ಸಹಾಯಕಗಳ ಬಳಕೆಯ ಬಗ್ಗೆ ಮಾರ್ಗದರ್ಶನ ನೀಡುವುದು.
- ಶಿಕ್ಷಕರ ಕ್ಷೇಮಾಭಿವೃದ್ಧಿಯನ್ನು ಸಾಧಿಸುವುದು.
- ಸಲ್ಲತಕ್ಕ ಅನುಕೂಲತೆಗಳಾದ ಸಂಬಳ, ಸಾರಿಗೆ, ಭತ್ಯೆ, ಭಡ್ತಿ ಸೇವಾ ಸೌಲಭ್ಯ ಮುಂತಾದವುಗಳನ್ನು ಒದಗಿಸಿಕೊಡುವುದು.

### ೫.೪.೧ ಅಭಿವೃದ್ಧಿ ಬಗ್ಗೆ ಕಾಲೇಜುಗಳಿಗೆ ಸಲಹೆ ಸೂಚನೆಗಳು

- ಕಾಲೇಜಿನಲ್ಲಿ ಸೇವಾವಧಿ ಶಿಕ್ಷಣದ ಒಂದು ಭಾಗವಾಗಿ ಶಿಕ್ಷಕರ, ಮೇಲ್ವಿಚಾರಕರ ಮತ್ತು ಆಡಳಿತಗಾರರ ವಿಚಾರ ಸಂಕಿರಣಗಳು, ಸಮಾವೇಶಗಳು, ಕಾರ್ಯಾಗಾರಗಳು ಅಧಿಕ ಸಂಖ್ಯೆಯಲ್ಲಿ ನಡೆಯುತ್ತಿರಬೇಕು.
- ಸಿಬ್ಬಂದಿಗಳಿಗೆ ಉತ್ತಮ ಕಂಪ್ಯೂಟರ ಶಿಕ್ಷಣದ ಬಗ್ಗೆ ತರಬೇತಿ ಮತ್ತು ಸಿಬ್ಬಂದಿಗಳ ವೈಯಕ್ತಿಕ ಅಭಿವೃದ್ಧಿ ಕಾರ್ಯಕ್ರಮಗಳು ನಡೆಯುವಂತಿರಬೇಕು.
- ಕೆಲವು ಕಾಲೇಜುಗಳಲ್ಲಿ ಓದಲು ಕೊಠಡಿಗಳು ಮತ್ತು ಉತ್ತಮ ತರಗತಿ ಕೊಠಡಿಗಳ ಅಗತ್ಯವಿದೆ.
- ಉತ್ತಮ ಫಲಿತಾಂಶವನ್ನು ಹೊಂದುವ ದೃಷ್ಟಿಯಿಂದ ಕಾಲೇಜಿನಲ್ಲಿ ಇರುವ ಸೌಕರ್ಯಗಳನ್ನು ಇನ್ನೂ ಉತ್ತಮಗೊಳಿಸುವ ಅಗತ್ಯವಿದೆ.
- ಕಾಲೇಜಿನಲ್ಲಿ ವಿವಿಧ ರೀತಿಯ ಕೋರ್ಸುಗಳನ್ನು ಹೆಚ್ಚಿಸುವ ಅಗತ್ಯವಿದೆ.

- ಕಾಲೇಜುಗಳಲ್ಲಿ ವಿಚಾರ ಸಂಕಿರಣ ಸಭಾಂಗಣಗಳ ಯೋಜನೆ ಮತ್ತು ಸಮಾವೇಶಗಳಿಗೆ ಉತ್ತಮ ಕೊಠಡಿಗಳ ಅವಶ್ಯಕತೆಯಿದೆ.
- ಕೆಲವು ಕಾಲೇಜುಗಳಲ್ಲಿ ಪ್ರಯೋಗಶಾಲೆ, ಫಲಾಹಾರ ಮಂದಿರ, ಶೋತ್ರ ಮಂದಿರ, ವಸತಿಗೃಹ, ಆಸ್ಪತ್ರೆ ಮುಂತಾದ ಸೌಕರ್ಯಗಳ ಅಗತ್ಯವಿದೆ.
- ಸಿಬ್ಬಂದಿಗಳಿಗೆ ದೊರಕುವ ವೇತನವು ಕಡಿಮೆಯಾಗಿದ್ದು ಅದನ್ನು ಉತ್ತಮಗೊಳಿಸುವ ಅವಶ್ಯಕತೆ ಇದೆ.
- ಸಿಬ್ಬಂದಿಗಳಿಗೆ ಭಡ್ತಿಗಳನ್ನು ನೀಡುತ್ತಿರಬೇಕು.

### ೫.೪.೨ ಶಿಕ್ಷಣದಲ್ಲಿ ಸಮಾಜ ಮತ್ತು ಸರಕಾರಕ್ಕೆ ಇರುವ ಸಲಹೆಗಳು

ಸಮಾಜ ಮತ್ತು ಪೋಷಕರ ಸಹಕಾರ ಶಾಲಾ ಅಭಿವೃದ್ಧಿಗೆ ಅಕ್ಷಯವಿದ್ದಂತೆ. ಪೋಷಕರ ಮತ್ತು ಸಮಾಜದೊಂದಿಗೆ ನಿಕಟಸಂಬಂಧ ಇಟ್ಟುಕೊಂಡಿರಬೇಕು. ಶಾಲಾಕಾಲೇಜುಗಳು ಸಮಾಜದ ಕೇಂದ್ರ ಬಿಂದು, ಸಮಾಜದ ಸಹಕಾರವಿಲ್ಲದೆ ಶಾಲೆಯ ಪ್ರಗತಿ ಸಾಧ್ಯವಿಲ್ಲ. ಸಾರ್ವಜನಿಕರ ಸಹಕಾರವನ್ನು ಸ್ವತಃ ಕಾಲೇಜಿನ ಮುಖ್ಯಸ್ಥರು ಪಡೆಯುವಂತೆ ಅವರೊಂದಿಗೆ ಉತ್ತಮ ಸಂಬಂಧವನ್ನು ಮುಖ್ಯ ಶಿಕ್ಷಕರು ಇಟ್ಟುಕೊಂಡಿರಬೇಕು. 'ಹಿತ್ತಲ ಗಿಡ ಮದ್ದಲ್ಲ' ಎಂದು ಸ್ಥಳೀಯ ಪ್ರತಿಭೆಯನ್ನು ತಿರಸ್ಕರಿಸದೆ, ಅವರಿಗೆ ಮಾನ್ಯತೆ ಕೊಡಬೇಕು. ಸಮುದಾಯಗಳೊಡನೆ ಉತ್ತಮ ಸಂಬಂಧ ಹೊಂದಿದಲ್ಲಿ ಶಾಲಾ-ಕಾಲೇಜುಗಳಿಗೆ ಬೇಕಾಗುವ ಕೆಲವು ಸೌಲಭ್ಯಗಳನ್ನು ಜನ ಸಮುದಾಯದಿಂದ ಪಡೆಯಬಹುದು. ದಾನದ ರೂಪದಲ್ಲಿ ಆರ್ಥಿಕ ನೆರವನ್ನು ಮತ್ತು ಉಪಕರಣಗಳನ್ನು ದಾನವಾಗಿ ಪಡೆಯಬಹುದು.

ಪ್ರಜಾಪ್ರಭುತ್ವದ ಮೌಲ್ಯಗಳು, ಸೃಷ್ಟಿಶೀಲತೆ, ವೈಜ್ಞಾನಿಕತೆ, ವೈಚಾರಿಕತೆ, ಮತ ನಿರಪೇಕ್ಷತೆ ಇತ್ಯಾದಿ ಮೌಲ್ಯಗಳು ತರುಣ-ತರುಣಿಯರಲ್ಲಿ ರೂಢಿಯಾಗುವ ರೀತಿಯಲ್ಲಿ ಪಠ್ಯಕ್ರಮವನ್ನು ಸರಕಾರವು ಸುಧಾರಿಸಬೇಕಾಗಿದೆ. ನಮ್ಮ ಸಾಂಸ್ಕೃತಿಕ ಅನನ್ಯತೆ ಹಾಗೂ ಸ್ಥಳೀಯ ವಿಶಿಷ್ಟತೆಗಳನ್ನು ಉಳಿಸಿಕೊಂಡು ವಿಶ್ವತೋಮುಖ ಚಿಂತನವುಳ್ಳ ವಿಶ್ವವಿದ್ಯಾಲಯ ಶಿಕ್ಷಣವನ್ನು ಜಾರಿಗೊಳಿಸುವ ಪ್ರಯತ್ನಗಳಾಗಬೇಕು. ಶಿಕ್ಷಣದ ಮೂಲಕ ಪುರುಷರೂ ಸ್ತ್ರೀಸಮಾನತೆ, ಗೌರವಪೂರ್ಣ ದಾಂಪತ್ಯ, ಸಮಪಾಲು ಬಾಳ್ವೆ, ಅಹಿಂಸೆ, ರಕ್ಷಣೆ ಮತ್ತು ಪ್ರಗತಿಯಂಥ ಮೌಲ್ಯಗಳನ್ನು ಹೊಂದುವ "ಕೌಟುಂಬಿಕ ಜೀವನ ಶಿಕ್ಷಣ"ವನ್ನು ಪಡೆಯುವಂತಾಗಬೇಕು (ಹನ್ಸ್, ೨೦೦೮).

ಶಿಕ್ಷಣದಂತಹ ಮಹತ್ವದ ವಿಚಾರಗಳಲ್ಲಿ ಸಧ್ಯ ಸಾರ್ವಜನಿಕ ಭಾಗಿತ್ವ ತೀರಾ ನಗಣ್ಯವಾಗಿದೆ. ಪರಿಣಾಮವಾಗಿ ಸರಕಾಗಳ ಮೇಲೆ ಹಕ್ಕೊತ್ತಾಯ ತರಲು, ಸದಾಗ್ರಹ ಮಾಡಲು ಸಾಧ್ಯವಾಗುತ್ತಿಲ್ಲ. ಆದುದರಿಂದ ಸಾರ್ವಜನಿಕರು ಹಾಗೂ ಶಿಕ್ಷಕರು ಮತ್ತು ಆಡಳಿತಗಾರರ ನಡುವಣ ಅಧಿಕಾಧಿಕ ಸಂಪರ್ಕ ಏರ್ಪಡಿಸುವ ಮತ್ತು ಪ್ರಜ್ಞಾವಂತ ಸಮುದಾಯದ ಮೂಲಕವೇ ಶಿಕ್ಷಣದ ನೀತಿಗಳ ಹೊಳಹು ದೊರೆಯುವಂತಹ ವ್ಯವಸ್ಥೆಯನ್ನು ನಾವು ರೂಢಿಸುವ ಅಗತ್ಯವಿದೆ.

ಅಧ್ಯಯನದಲ್ಲಿ ಕಾಲೇಜು ಶಿಕ್ಷಣದ ಅಧ್ಯಾಪಿಕೆಯರ ಅಭಿವೃದ್ಧಿ ಬಗ್ಗೆ ವಿಶ್ಲೇಷಿಸಲಾಗಿದೆ. ಇತ್ತೀಚೆಗೆ ಗ್ರಾಮೀಣ ಪ್ರದೇಶದಲ್ಲಿ ಅನೇಕ ಕಾಲೇಜುಗಳು ತಲೆಯೆತ್ತುತ್ತಿವೆ. ಆದರೆ ನಗರ ಕಾಲೇಜುಗಳಿಗೆ ಹೋಲಿಸಿದರೆ ಗ್ರಾಮೀಣ ಕಾಲೇಜುಗಳಲ್ಲಿ ಸಂಪೂರ್ಣವಾಗಿ ಅಭಿವೃದ್ಧಿಯನ್ನು ಹೊಂದಲಿಲ್ಲ. ಅಧ್ಯಯನದಲ್ಲಿ ೫ ನಗರ ಮತ್ತು ೫ ಗ್ರಾಮೀಣ ಕಾಲೇಜುಗಳನ್ನು ಮಾತ್ರ ತೆಗೆದುಕೊಳ್ಳಲಾಗಿದೆ. ಹಾಗಾಗಿ ಗ್ರಾಮೀಣ ಕಾಲೇಜುಗಳಲ್ಲಿ ಇನ್ನೂ ಹೆಚ್ಚಿನ ಅಭಿವೃದ್ಧಿಯ ಅಗತ್ಯವಿದ್ದು ಈ ಬಗ್ಗೆ ವಿಸ್ತೃತವಾದ ಕ್ಷೇತ್ರ ಕಾರ್ಯದೊಂದಿಗೆ ವಿಸ್ತಾರವಾದ ಮತ್ತು ಆಳವಾದ ಅಧ್ಯಯನದ ಅಗತ್ಯವಿದೆ. ಅದಕ್ಕೆ ಮಾರ್ಗ ಸೂಚಿಯಾಗಿ ಈ ಅಧ್ಯಯನವನ್ನು ಕೈಗೊಳ್ಳಲಾಯಿತು. ಶಿಕ್ಷಣ ವ್ಯವಸ್ಥೆಯಲ್ಲಿ ಅಧ್ಯಾಪಿಕೆಯರ ಅಭಿವೃದ್ಧಿಯ ಆಧಾರದ ಮೇಲೆ ಕಾರ್ಯಕ್ರಮ ರೂಪಿಸಲು ಈ ರೀತಿಯ ಕ್ರಿಯಾತ್ಮಕ ಸಂಶೋಧನೆ ಉಪಯುಕ್ತವಾದುದು ಎಂಬುದನ್ನು ಈ ಅಧ್ಯಯನ ಶ್ರುತಪಡಿಸಿದೆ.

## ಉಲ್ಲೇಖ

1. ವಿ. ಬಾಸಿಲ್ ಹನ್ಸ್ (2009) 'ಹೆಲ್ತ್ ಆಂಡ್ ಲೇಬರ್ ಪ್ರೊಡಕ್ಟಿವಿಟಿ – ಎ ಜೆಂಡರ್ ಪರ್‌ಸ್ಪೆಕ್ಟಿವ್', ದೀಕ್ಷಾ, 8(1) :62-70.

ಆತ್ಮೀಯರೇ,

ನಾನು ಎಂ.ಫಿಲ್. ಪದವಿಯ ಆಂಶಿಕ ಅವಶ್ಯಕತೆಗಾಗಿ **"ಮಹಿಳಾ ಅಧ್ಯಾಪಿಕೆಯರು ಮತ್ತು ಅಭಿವೃದ್ಧಿ – ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಾಲೇಜು ಶಿಕ್ಷಣದ ಒಂದು ಅಧ್ಯಯನ"** ಎಂಬ ವಿಷಯದ ಕುರಿತಾದ ಅಧ್ಯಯನ ಕೈಗೊಂಡಿದ್ದೇನೆ. ಈ ಅಧ್ಯಯನವನ್ನು ಪೂರ್ಣಗೊಳಿಸಲು ನಿಮ್ಮ ಅಭಿಪ್ರಾಯ, ಅನಿಸಿಕೆಗಳು ಬಹಳ ಪ್ರಾಧಾನ್ಯತೆಯನ್ನು ವಹಿಸುತ್ತವೆ. ನಿಮ್ಮ ಅಭಿಪ್ರಾಯ, ಅನಿಸಿಕೆ ಕೇವಲ ಅಧ್ಯಯನಕ್ಕಾಗಿ ಮಾತ್ರ ಬಳಸಿಕೊಳ್ಳಲಾಗಿದೆಯೆಂದು ಈ ಮೂಲಕ ಸ್ಪಷ್ಟಪಡಿಸಿಕೊಳ್ಳುತ್ತೇನೆ.

ವಂದನೆಗಳೊಂದಿಗೆ,

ಇತೀ ತಮ್ಮ ವಿಶ್ವಾಸಿ,
**ಅಮಿತ ಆಳ್ವ**
ಬದ್ರಿಯಾ ಪ್ರಥಮ ದರ್ಜೆ ಕಾಲೇಜು
ಮಂಗಳೂರು

---

1. ಕಾಲೇಜಿನ ಹೆಸರು :

2. ಕಾಲೇಜು ಸ್ಥಾಪನೆಯಾದ ವರ್ಷ :

3. ನಿಮ್ಮ ಸಂಸ್ಥೆಯು ಈ ಕೆಳಗಿನ ಯಾವುದಕ್ಕೆ ಒಳಪಟ್ಟಿದೆ?

   ಖಾಸಗಿ ☐ ಅನುದಾನಿತ ☐

   ಸರಕಾರಿ ☐ ಸ್ವಾಯತ್ತ ☐

4. ಕಾಲೇಜು ನ್ಯಾಕ್ ಮಾನ್ಯತೆಯನ್ನು ಪಡೆದಿದೆಯೇ?

   ಹೌದು ☐ ಇಲ್ಲ ☐

   ಹೌದಾದರೆ ಗ್ರೇಡ್/ಶ್ರೇಣಿ ☐

5. ಕಾಲೇಜಿನಲ್ಲಿ ಲಭ್ಯವಿರುವ ಕೋರ್ಸುಗಳು : ☐ ☐ ☐ ☐ ☐

6. ಶಿಕ್ಷಕರ ಸಂಖ್ಯೆ : ಪುರುಷರು ☐ ಮಹಿಳೆಯರು ☐ ಒಟ್ಟು ☐

7. ನಿಮ್ಮ ಸಂಸ್ಥೆಯು ಯಾವ ಪ್ರದೇಶಕ್ಕೆ ಒಳಪಟ್ಟಿದೆ?

   ನಗರ ☐ ಗ್ರಾಮೀಣ ☐

1. ಹೆಸರು :
2. ವಯಸ್ಸು : 22ರಿಂದ 25 ವರ್ಷ ☐ 25ರಿಂದ 35 ವರ್ಷ ☐ 35ರಿಂದ 45 ವರ್ಷ ☐ 46ರಿಂದ ಮೇಲ್ಪಟ್ಟು ☐
3. ವಿದ್ಯಾರ್ಹತೆ : ಎಂ.ಎ. ☐ ಎಂ.ಕಾಂ. ☐ ಎಂ.ಎಸ್‌ಸಿ. ☐ ಎಂ.ಫಿಲ್. ☐ ಪಿ.ಹೆಚ್‌ಡಿ. ☐ ಇತರೆ ☐
4. ನೀವು NET/ SLET ಉತ್ತೀರ್ಣರೇ? ಹೌದು ☐ ಇಲ್ಲ ☐
5. ನಿಮ್ಮ ಸೇವಾನುಭವ : 0ರಿಂದ 3 ವರ್ಷ ☐ 4ರಿಂದ 8 ವರ್ಷ ☐ 9ರಿಂದ 15 ವರ್ಷ ☐ 16ರಿಂದ ಮೇಲ್ಪಟ್ಟು ☐
6. ನಿಮ್ಮ ಬೋಧನಾ ವಿಷಯ :
7. ನಿಮ್ಮ ಬೋಧನಾ ಅವದಿ (ಮಾಸಿಕ) :
8. ಪಡೆಯುತ್ತಿರುವ ವೇತನ – ಯು.ಜಿ.ಸಿ. ☐ ನಿರ್ವಾಹಕರಿಂದ ☐ ಇತರೆ ☐
9. ಮಾಸಿಕ ವೇತನ : ರೂ. 6,000 – 10,000 ☐ 11,000 – 15,000 ☐ 16,000 – 20,000 ☐ 20,000ಕ್ಕಿಂತ ಮೇಲ್ಪಟ್ಟು ☐
10. ನೀವು ಯಾವುದಾದರೂ ಚರ್ಚಾಕೂಟದಲ್ಲಿ ಭಾಗವಹಿಸಿದ್ದೀರಾ? ಹೌದು ☐ ಇಲ್ಲ ☐
11. ನಿಮ್ಮ ಅಧ್ಯಾಪನಾ ವೃತ್ತಿಯ ಉದ್ದೇಶ : ಆಸಕ್ತಿ ☐ ಆರ್ಥಿಕ ಒತ್ತಡ ☐ ಇತರೆ ☐
12. ನಿಮ್ಮ ಕಾಲೇಜಿನಲ್ಲಿ ನಿಮ್ಮ ಪ್ರಗತಿಗೆ ಪೂರಕ ವಾತಾವರಣವಿದೆಯೇ? ಹೌದು ☐ ಇಲ್ಲ ☐
13. ನಿಮ್ಮ ಸಂಸ್ಥೆಯಲ್ಲಿ ನಿಮಗೆ ಉದ್ಯೋಗ ಭದ್ರತೆ ಇದೆಯೇ? ಹೌದು ☐ ಇಲ್ಲ ☐
14. ನಿಮ್ಮ ಸಹೋದ್ಯೋಗಿಗಳು ನಿಮ್ಮೊಂದಿಗೆ ಇರುವ ರೀತಿ :
    ಉತ್ತಮ ☐ ಅತ್ಯುತ್ತಮ ☐ ತೃಪ್ತಿಕರ ☐ ಅತೃಪ್ತಿಕರ ☐
15. ವಿದ್ಯಾರ್ಥಿಯ ಭವಿಷ್ಯದಲ್ಲಿ ನೀವು ಕಾಣಲು ಬಯಸುವುದು :
    ಆದರ್ಶ ವ್ಯಕ್ತಿತ್ವ ☐ ಉತ್ತಮ ಸ್ಥಾನಮಾನ ☐ ಉದ್ಯೋಗ ☐ ಇತರೆ ☐
16. ನಿಗದಿತ ಅವಧಿಗಿಂತ ಹೆಚ್ಚಿನ ಸಮಯವನ್ನು ವಿದ್ಯಾರ್ಥಿಗಳಿಗೆ ಮೀಸಲಿಡಲು ಇಚ್ಚಿಸುವಿರಾ? ಹೌದು ☐ ಇಲ್ಲ ☐
17. ನೀವು ನಿಮ್ಮ ವಿದ್ಯಾರ್ಥಿಗಳಿಗೆ ಇತರ ಚಟುವಟಿಕೆಗಳಿಗೆ ಪ್ರೋತ್ಸಾಹ ನೀಡಿದ್ದೀರಾ? ಹೌದು ☐ ಇಲ್ಲ ☐

## ಸೂಚನೆ: ಮಹಿಳೆಯರಿಗೆ ಮಾತ್ರ

1. ನಿಮ್ಮ ಸಂಸ್ಥೆಯಲ್ಲಿ ಮಹಿಳಾ ಉದ್ಯೋಗಿಗಳಿಗೆ ಸಮಸ್ಯೆಗಳೇನಾದರೂ ಇದೆಯೇ? ಹೌದು ☐ ಇಲ್ಲ ☐
2. ನಿಮ್ಮ ಸಂಸ್ಥೆಯಲ್ಲಿ ಮಹಿಳಾ ಪ್ರತಿಬಂಧಕ ಸಮಿತಿ ಇದೆಯೇ? ಹೌದು ☐ ಇಲ್ಲ ☐
3. ನಿಮ್ಮ ಸಂಸ್ಥೆಯಲ್ಲಿ ಮಹಿಳೆಯರಿಗೆ ಸಂಬಂಧಿಸಿದಂತೆ ಮೂಲಭೂತ ಸೌಕರ್ಯಗಳಿವೆಯೇ? ಹೌದು ☐ ಇಲ್ಲ ☐
4. ನಿಮ್ಮ ಕಾಲೇಜಿನಲ್ಲಿ ಪುರುಷ ಮತ್ತು ಮಹಿಳೆಯರಲ್ಲಿ ಸೌಹಾರ್ದತೆ ಇದೆಯೇ? ಹೌದು ☐ ಇಲ್ಲ ☐

# ಗ್ರಂಥಸೂಚಿ

ಭಾಟಿಯಾ, ಬಿ.ಡಿ. (೧೯೯೮). 'ಥಿಯರಿ ಆಂಡ್ ಪ್ರಿನ್ಸಿಪಲ್ಸ್ ಆಫ್ ಎಜ್ಯುಕೇಶನ್ ಬೀಯಿಂಗ್ ಫಿಲೋಸೋಫಿಕಲ್ ಆಂಡ್ ಸೋಶಿಯಲ್ ಬೇಸಸ್ ಆಫ್ ಎಜ್ಯುಕೇಶನ್' ನವದೆಹಲಿ.

ಭಾಟಿಯಾ, ಕೆ.ಕೆ. (೧೯೮೮), ನವಂಗ್ ಜಿ.ಎಲ್. (೧೯೭೪). 'ಶಿಕ್ಷಣದ ತಂತ್ರಗಳು ಮತ್ತು ತತ್ತ್ವಗಳು' ಪ್ರಕಾಶ್ ಬ್ರದರ್ಸ್, ಲೂಧಿಯಾನ.

ಚೆಂಗ್ ಟಿ.ಸಿ.ಇ. (೧೯೯೩). 'ಆಪರೇಶನ್ಸ್ ರಿಸರ್ಚ್ ಎಂಡ್ ಹೈಯರ್ ಎಜ್ಯುಕೇಶನ್ ಅಡ್ಮಿನಿಸ್ಟ್ರೇಶನ್', ಜರ್ನಲ್ ಆಫ್ ಎಜ್ಯುಕೇಶನಲ್ ಅಡ್ಮಿನಿಸ್ಟ್ರೇಶನ್ ೩೧(೧): ೨೯

ಚಬ್ ಎಸ್.ಪಿ. (೧೯೬೭). 'ಭಾರತದಲ್ಲಿ ಶಿಕ್ಷಣದ ತತ್ತ್ವಗಳು' ರಾಮ್‌ಪ್ರಸಾದ ಪಬ್ಲಿಕೇಶನ್, ಆಗ್ರಾ.

ಧೇಸಿ, ಆತರ್ ಎಸ್. (೨೦೦೧). 'ಎಕ್ಸ್‌ಪೆಕ್ಟೇಶನ್ ಎಂಡ್ ಪೋಸ್ಟ್ ಸ್ಕೂಲ್ ಚಾಯ್ಸ್' ಜರ್ನಲ್ ಆಫ್ ಎಜ್ಯುಕೇಶನ್ ಎಂಡ್ ಟ್ರೈನಿಂಗ್ ೪೩(೧):೬೩

ಗೋರ್ ಎಂ.ಎಸ್. (೧೯೯೪) 'ಭಾರತದ ಶೈಕ್ಷಣಿಕ ರಚನೆ ಮತ್ತು ವಿಧಾನ' ರಾವತ್ ಪಬ್ಲಿಕೇಶನ್ಸ್, ನವದೆಹಲಿ.

ಗ್ರಹಾಂ, ಫೌಲರ್ (೧೯೯೦) 'ದ ವೊಕೇಶನಲ್ ರೂಟ್ ಟು ಹೈಯರ್ ಎಜ್ಯುಕೇಶನ್' ಜರ್ನಲ್ ಆಫ್ ಎಜ್ಯುಕೇಶನ್ ಎಂಡ್ ಟ್ರೈನಿಂಗ್ ೩೨(೪):೫೩

ಜನಾರ್ಧನ್, ಪ್ರಸಾದ್, (೨೦೦೫) 'ಶಿಕ್ಷಣ ಮತ್ತು ಶಿಕ್ಷಕ' ಕಾನಿಷ್ಕ ಪಬ್ಲಿಷರ್, ನವದೆಹಲಿ.

ಜಯರಾಮ್ ಎನ್., ಪ್ರೇಮ್ ರಾವತ್ (೧೯೯೦) 'ಭಾರತದಲ್ಲಿ ಸಾಮಾಜಿಕ ಶಿಕ್ಷಣ' ರಾವತ್ ಪಬ್ಲಿಕೇಶನ್, ಜೈಪುರ.

ಮಾಲಿ ಎಂ.ಜಿ. (೧೯೮೯). 'ಎಜ್ಯುಕೇಶನ್ ಆಫ್ ಮಾಸಸ್ ಇನ್ ಇಂಡಿಯಾ' ಮಿತ್ತಲ್ ಪಬ್ಲಿಕೇಶನ್, ನವದೆಹಲಿ.

ಪಾಟಿಲ್ ವಿ.ಟಿ. (೧೯೯೦). 'ನ್ಯೂ ಡೈಮೆನ್‌ಶನ್ಸ್ ಆಂಡ್ ಪರ್ಸ್‌ಪೆಕ್ಟಿವ್ ಇನ್ ಹೈಯರ್ ಎಜ್ಯುಕೇಶನ್' ರೂಪರಾಣಿ ಪಬ್ಲಿಕೇಶನ್, ಪಾಂಡಿಚೇರಿ.

ಸಪ್ರು ಸಿ.ಆರ್. (೧೯೯೩). 'ಟುವರ್ಡ್ಸ್ ೨೦೦೦ ಎಂಡ್ ಬಿಯೊಂಡ್ ಪ್ರಿಪರೇಶನ್ ಆಫ್ ಎಜ್ಯುಕೇಶನ್ ಮ್ಯಾನೇಜರ್ಸ್ ಇನ್ ಇಂಡಿಯಾ' ಜರ್ನಲ್ ಆಫ್ ಎಜ್ಯುಕೇಶನ್ ಎಂಡ್ ಅಡ್ಮಿನಿಸ್ಟ್ರೇಶನ್, ೪೧(೪):೮೯

ಶರ್ಮಾ, ರಮೇಶ್ ಸಿ. (೨೦೦೫) 'ಓಪನ್ ಲರ್ನಿಂಗ್ ಇನ್ ಇಂಡಿಯಾ ಇವಲ್ಯೂಶನ್ ಡೈವರ್ಸಿಫಿಕೇಶನ್ ಎಂಡ್ ರೀಚಿಂಗ್' ಜರ್ನಲ್ ಆಫ್ ಓಪನ್ ಲರ್ನಿಂಗ್. ೨೦(೩):೫೬

ಸಿಂಘಲ್, ನಿಧಿ (೨೦೦೬). 'ಇನ್‌ಕ್ಲೂಸಿವ್ ಎಜ್ಯುಕೇಶನ್ ಇನ್ ಇಂಡಿಯಾ ಇಂಟರ್‌ನ್ಯಾಶನಲ್ ಕಾನ್ಸೆಪ್ಟ್ ನ್ಯಾಶನಲ್ ಇಂಟರ್‌ಪ್ರಿಟೇಶನ್' ಜರ್ನಲ್ ಆಫ್ ಡಿಸೆಬಿಲಿಟಿ ಡೆವಲಪ್‌ಮೆಂಟ್ ಎಂಡ್ ಎಜ್ಯುಕೇಶನ್. ೫೩(೩):೪೪–೪೮

ಶ್ರೀವಾಸ್ತವ ಆರ್.ಸಿ. (೧೯೮೯) 'ದ ಚಾಲೆಂಜ್ ಆಫ್ ಬಿಲ್ಡಿಂಗ್ ಕಾಲೇಜ್ ಎನ್‌ವಯರ್ನ್‌ಮೆಂಟ್ ಇನ್ ಇಂಡಿಯಾ' ಜರ್ನಲ್ ಆಫ್ ಎಜ್ಯುಕೇಶನ್ ಮ್ಯಾನೇಜ್‌ಮೆಂಟ್ ೩(೧):೩೩

ಉಪಾಧ್ಯಾಯ್ ಜಿ.ಸಿ. (೧೯೯೧). 'ಎಜ್ಯುಕೇಶನ್ ಎಂಡ್ ಸೋಶಿಯಲ್ ಚಾರ್ಜ್' ಕಾಮನ್‌ವೆಲ್ತ್ ಪಬ್ಲಿಷರ್ಸ್, ನವದೆಹಲಿ.

ವಾರೇ ಆರ್. (೧೯೯೩). 'ದ ಕೋರ್ಸ್ ಫಾರ್ ಹೈಯರ್ ಎಜ್ಯುಕೇಶನ್' ಜರ್ನಲ್ ಆಫ್ ಮ್ಯಾನೇಜಿಂಗ್ ಸರ್ವಿಸ್ ಕ್ವಾಲಿಟಿ. ೩(೬):೧೫

ವೆಸ್ಲಿಂಗ್, ಅಲ್ಲೋಡಿ, ಮಾರಾ (೨೦೦೯) 'ಈಕ್ವಲ್ ಒಪರ್ಚುನಿಟಿ ಇನ್ ಎಜ್ಯುಕೇಶನ್ ಸಿಸ್ಟಮ್' ಯುರೋಪಿಯನ್ ಜರ್ನಲ್ ಆಫ್ ಎಜ್ಯುಕೇಶನ್, ೪೨(೧): ೨೨–೩೦

ರಘು ಕೆ. (೧೯೯೮). 'ಭಾರತದಲ್ಲಿ ಶಿಕ್ಷಣ ಮತ್ತು ಸಮಾಜ' ಶಾರದಾ ಮುದ್ರಣ, ಗಾರ್ಡನ್ ರಸ್ತೆ, ಮೈಸೂರು.

ನಾಗರಾಜ್ ಡಿ.ಕೆ. (೧೯೯೭). 'ಶೈಕ್ಷಣಿಕ ಸಂಶೋಧನೆ' ಶ್ರೀರಾಮ ಪ್ರಿಂಟರ್ಸ್, ಬೆಂಗಳೂರು.

ಶಿಶಿಲ (೨೦೦೨). 'ಆರ್ಥಿಕ ಅಭಿವೃದ್ಧಿಯ ವಿಜ್ಞಾನ' ಮಂಗಳ ಪ್ರಕಾಶನ, ಬೆಂಗಳೂರು.

ಜ್ಯೋತಿ (೨೦೦೭) 'ಮಹಿಳಾ ಸಾಮಾಜಿಕತೆ'. ವೆಂಕಟೇಶ್ವರ್ ಪ್ರೆಸ್, ಬೆಂಗಳೂರು.

ಕೃಷ್ಣಮೂರ್ತಿ ಎಚ್.ಆರ್. (೨೦೦೬), 'ಭಾರತದ ಆರ್ಥಿಕ ವ್ಯವಸ್ಥೆ' ಸ್ವಪ್ನ ಬುಕ್‌ಹೌಸ್, ಬೆಂಗಳೂರು.

ಹೆರಾಲ್ಡ್ ಜೆ. (೧೯೮೬). 'ಶಿಕ್ಷಣ: ಅಂದು-ಇಂದು-ಮುಂದು' ಕಾಂಪ್ಲೆಕ್ಸ್ ಮುದ್ರಣ, ನ್ಯೂಯಾರ್ಕ್.

ಪಲಿವಾಲ್ ಎಂ.ಆರ್. (೧೯೮೪). 'ಶಿಕ್ಷಣ ಮತ್ತು ಸಾಮಾಜಿಕ ಬದಲಾವಣೆ', ನ್ಯೂಡೆಲ್ಲಿ, ಪಬ್ಲಿಕೇಶನ್ಸ್.

ಮುಜಾಮಿಲ್ ಜಾನ್ (೨೦೦೮). 'ಇಂಪ್ಯಾಕ್ಟ್ ಆಫ್ ಎಜ್ಯುಕೇಶನ್ ಆನ್ ಡಿಸಿಶನ್ ಮೇಕಿಂಗ್ ಪವರ್ ಅಮಂಗ್ ವಿಮೆನ್' ಜರ್ನಲ್ ಆಫ್ ಎಜ್ಯುಕೇಶನಲ್ ಪ್ಲಾನಿಂಗ್ ಎಂಡ್ ಅಡ್ಮಿನಿಸ್ಟ್ರೇಶನ್' ೨೨(೩):೨೭೩-೨೮೩

ಶೆಣೈ ಗೀತಾ (೨೦೦೭) 'ಸ್ತ್ರೀ ವಿಮುಕ್ತಿ ಚಿಂತನೆ' ಅಖಿಲ ಕರ್ನಾಟಕ ಲೇಖಕಿಯರ ಸಮ್ಮೇಳನ, ಮಂಡ್ಯ.

ಅನ್ನಪೂರ್ಣೇಶ್ವರಿ ಎನ್. ಒಡೆಯರ್ ಡಿ. (೨೦೦೩). 'ಮಹಿಳಾ ಅಧ್ಯಯನಗಳು ಆರ್ಥಿಕ ನೆಲೆ ಮತ್ತು ಆಯಾಮಗಳು' ಮಾನವ ಅಭಿವೃದ್ಧಿ ಅಧ್ಯಯನ ಕೇಂದ್ರ, ಮೈಸೂರು.

ಮುಗಳಿ ರಂ.ಶ್ರೀ. (೧೯೭೨). 'ಶಿಕ್ಷಣದ ಮುನ್ನಡೆ' ಸಾಹಿತ್ಯ ಭಂಡಾರ, ಬೆಂಗಳೂರು.

ಅನ್ನಪೂರ್ಣೇಶ್ವರಿ ಎನ್. ಒಡೆಯರ್ ಡಿ. (೨೦೦೨). 'ಮಹಿಳಾ ಶಿಕ್ಷಣ ಮತ್ತು ಅಭಿವೃದ್ಧಿ' ಮಾನವ ಅಭಿವೃದ್ಧಿ ಅಧ್ಯಯನ ಕೇಂದ್ರ, ಮೈಸೂರು.

ಕಾಮತ್ ಜ್ಯೋತ್ಸ್ನಾ (೧೯೯೯). 'ಮಹಿಳೆ: ಒಂದು ಅಧ್ಯಯನ' ನವಕರ್ನಾಟಕ ಪ್ರಕಾಶನ.

ಹೇಮಲತಾ ಎಚ್.ಎಸ್. (೨೦೦೬), 'ಮಹಿಳಾ ಅಧ್ಯಯನಗಳು' ಮೂರ್ತಿ ಪ್ರಕಾಶನ, ಮೈಸೂರು.

ನಾಜ್‌ನೀನ್ ಬೇಗಂ (೨೦೦೦). 'ಗ್ರಾಮೀಣ ಬದುಕು ಮತ್ತು ಮಹಿಳೆ' ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಶಾಂತಾ ಇಮ್ರಾಪುರ (೨೦೦೧) 'ಧರ್ಮ, ಮಹಿಳೆ ಮತ್ತು ಸಮಾಜ' ಚೇತನಾ ಪ್ರಕಾಶನ, ಧಾರವಾಡ.

ಜ್ಯೋತಿ (೨೦೧೦). 'ಕರಾವಳಿ ಉದ್ದಿಮೆ ಮತ್ತು ಮಹಿಳೆ'. ಪ್ರಜಾವಾಣಿ ೫-೬-೨೦೧೦

ನಾಯಕ ಹಾ.ಮಾ. (೧೯೭೧) 'ಸ್ತ್ರೀ ಮತ್ತು ಸಮಾಜ' ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು.

ಇಂದಿರಾ ಆರ್. (೨೦೦೨). 'ಮಹಿಳೆ, ಸಮಾಜ ಮತ್ತು ಸಂಸ್ಕೃತಿ' ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.

ಪ್ರೀತಿ ಶುಭಚಂದ್ರ (೨೦೦೨). 'ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು' ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಬಾಬುರಾವ್ ಎಂ. (೨೦೦೫). 'ಮಹಿಳಾ ಸಬಲೀಕರಣ' ಲಕ್ಷ್ಮೀ ಪ್ರಕಾಶನ, ಬೆಂಗಳೂರು.

ಅಬ್ಬೂಬಕರ್ ಸಾರಾ (೨೦೦೭). 'ಸಾಹಿತ್ಯ, ಸಂಸ್ಕೃತಿ ಮತ್ತು ಮಹಿಳೆ' ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕೃಷ್ಣಮೂರ್ತಿ (೧೯೮೪). 'ಭಾರತೀಯ ನಾರಿ ಮತ್ತು ಸಮಾನತೆ' ಐಬಿಎಚ್ ಪ್ರಕಾಶನ, ಬೆಂಗಳೂರು.

ಉಷಾ ಎಂ. (೨೦೦೪). 'ಮಹಿಳಾ ಚಳುವಳಿ ಮತ್ತು ವಿಷಯಗಳು' ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವನಜ ವೆಂ. (೨೦೦೩). 'ಹೆಣ್ಣು-ಹಕ್ಕು-ಹೋರಾಟ' ಅಭಿರುಚಿ ಪ್ರಿಂಟರ್ಸ್, ಮೈಸೂರು.

ಪವರ್ ಕೆ.ಬಿ. ಪಂಡ ಎಸ್.ಕೆ (೧೯೯೫). 'ಭಾರತದಲ್ಲಿ ಉನ್ನತ ಶಿಕ್ಷಣ' ಎಸೋಸಿಯೇಶನ್ ಆಫ್ ಇಂಡಿಯನ್ ಯುನಿವರ್ಸಿಟಿ, ದೆಹಲಿ.

ಜಯರಾಮ ಎನ್. (೧೯೮೭) 'ಉನ್ನತ ಶಿಕ್ಷಣ' ಮಿತ್ತಲ್ ಪಬ್ಲಿಕೇಶನ್ಸ್, ದೆಹಲಿ.

ಚೌಹಾನ್ ಸಿ.ಪಿ.ಎಸ್. (೧೯೯೦) 'ಭಾರತದಲ್ಲಿ ಉನ್ನತ ಶಿಕ್ಷಣ' ಆಶೀಶ್ ಪಬ್ಲಿಷಿಂಗ್, ದೆಹಲಿ.

ಹೆಗಡೆ ಆರ್.ಡಿ. (೨೦೦೮) 'ಭಾರತದಲ್ಲಿ ಶಿಕ್ಷಣ ಸವಾಲು ಸಾಧ್ಯತೆ' ಚಿಂತನ ಪುಸ್ತಕ ಮಳಿಗೆ, ಬೆಂಗಳೂರು.

ಮಹಾಬಲೇಶ್ವರ ರಾವ್ (೨೦೦೭) 'ಶಿಕ್ಷಣ ವರ್ತಮಾನ' ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.

ಮಾರ್ಟಿನ್ ಕೊರೋನಾಯ್ (೨೦೦೭). 'ವಿಮೆನ್ ಹೈಯರ್ ಎಜ್ಯುಕೇಶನ್ ಎಂಡ್ ಎಕೊನೋಮಿಕ್ ಡೆವಲಪ್‌ಮೆಂಟ್' ಜರ್ನಲ್ ಆಫ್ ಎಜ್ಯುಕೇಶನಲ್ ಪ್ಲಾನಿಂಗ್ ಎಂಡ್ ಅಡ್ಮಿನಿಸ್ಟ್ರೇಶನ್. ೨೧(೩):೨೦೩–೨೨೯

ಶಿಂಧೆ ಜಗನ್ನಾಥ್ ಆರ್. ಮತ್ತು ವಿ. ರಾಮಕೃಷ್ಣ (2008). 'ಶೆಡ್ಯೂಲ್ಡ್ ಕಾಸ್ಟ್ ವಿಮೆನ್ ಇನ್ ಹೈಯರ್ ಎಜ್ಯುಕೇಶನ್ ಆಂಡ್ ಪಾಲಿಸೀಸ್: ಎ ಸ್ಟಡಿ ಆಫ್ ಕರ್ನಾಟಕ', ದಿ ಜರ್ನಲ್ ಆಫ್ ವರ್ಲ್ಡ್ ಇನ್‌ಟೆಲೆಕ್ಚುವಲ್ ಪ್ರಾಪರ್ಟಿ ರೈಟ್ಸ್, 4(1-2): 259-272.

ಹರೀಶ್ ಎನ್., ಜಯಶೀಲ ಮತ್ತು ವಿ. ಬಾಸಿಲ್ ಹನ್ಸ್ (2007). 'ಪ್ರೈಮರಿ ಎಜ್ಯುಕೇಶನ ಆಂಡ್ ಇನ್‌ಫ್ರಾಸ್ಟ್ರಕ್ಚರ್ ಇನ್ ಇಂಡಿಯಾ: ಪ್ರೊಗ್ರೆಸ್ ಆಂಡ್ ಪ್ರಾಬ್ಲಮ್ಸ್', ದಿ ಜರ್ನಲ್ ಆಫ್ ವರ್ಲ್ಡ್ ಇನ್‌ಟೆಲೆಕ್ಚುವಲ್ ಪ್ರಾಪರ್ಟಿ ರೈಟ್ಸ್, 3(1-2): 191-204.

ಸರ್‌ಕಾರ್ ಸಿದ್ದಾರ್ಥ್ ಮತ್ತು ಐಸಾಕ್ ವಾಕು ಅಬೇಂಪಾಂಗ್ (ಸಂ) (2010) 'ಜೆಂಡರ್ ಆಂಡ್ ಪವರ್ಟಿ ಆಂಡ್ ಸಸ್ಟೇನೆಬಲ್ ಲೈವ್ಲಿಹುಡ್, ಎರೈಸ್ ಡಿಸ್ಟ್ರಿಬ್ಯೂಟರ್ಸ್, ನವದೆಹಲಿ.

ಹನ್ಸ್ ವಿ. ಬಾಸಿಲ್ (2009) 'ಹೆಲ್ತ್ ಆಂಡ್ ಲೇಬರ್ ಪ್ರೊಡಕ್ಟಿವಿಟಿ – ಎ ಜೆಂಡರ್ ಪರ್‌ಸ್ಪೆಕ್ಟಿವ್', ದೀಕ್ಷಾ, 8(1) : 62-70.

